# ಸಂಕ್ರಮಣ

ಮಾರ್ಚ್ 1982

## ಅಸ್ವಸ್ಥ ಸಮಾಜದಲ್ಲಿ ಪ್ರತಿಭೆ, ಪ್ರತಿಷ್ಠೆ, ಪ್ರತಿಷ್ಠಾನ

ವ್ಯಾಸರಾಯ ಬಲ್ಲಾಳ

## ಆವಾಸ ವಿಜ್ಞಾನದ ಮೂಲ ತತ್ವಗಳು

ಮಾಧವ ಗಾಡ್ಗಿಲ್

## ಟಿಪ್ಪಣಿಗಳು

## ಕೇರಳದ ಸಾಹಿತಿ ಪೊಟ್ಟೆಕಾಟ್

ಒ. ಕೆ. ನಂಬಿಯಾರ್

# ಅಂಕಣ

ಮಾರ್ಚ್ 1982 ಸಂಪುಟ–3 ಸಂಚಿಕೆ–4


'ಅಂಕಣ'ದ ಮುಂದಿನ ಸಂಚಿಕೆ ಬೇಂದ್ರೆ ವಿಶೇಷ ಸಂಚಿಕೆಯಾಗಿ ಬರಲಿದೆ. ನಮ್ಮ ಓದುಗರು 'ಅಂಕಣ'ಕ್ಕೆ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಉತ್ತಮ ಲೇಖನಗಳನ್ನು, ಟಿಪ್ಪಣಿಗಳನ್ನು ಕಳುಹಿಸಬಹುದು. ಜೊತೆಗೆ 'ಅಂಕಣ'ದ ಬರಹಗಳಿಗೆ ಪ್ರತಿಕ್ರಿಯೆ ಸೂಚಿಸುವುದರ ಮೂಲಕ ಚರ್ಚೆಗೆ ಅವಕಾಶ ಮಾಡಿಕೊಡಬೇಕಾಗಿ ವಿನಂತಿ.

ಈ ಸಂಚಿಕೆಯಲ್ಲಿ ಶ್ರೀ ವ್ಯಾಸರಾಯ ಬಲ್ಲಾಳ ಲೇಖನವನ್ನು ಮುಂಬಾಯಿ **'ತಾಯಿ ನುಡಿ'** ಪತ್ರಿಕೆಯಿಂದ, ಶ್ರೀ ಮಾಧವ ಗಾಡ್ಗಿಲ್ ಅವರ ಲೇಖನವನ್ನು **'ಆಕಾಶವಾಣಿ'** ಕೃಪೆಯಿಂದ, ದಲಿತಸಾಹಿತ್ಯ ಟಿಪ್ಪಣಿಯನ್ನು ಮುಂಬಾಯಿ **'EPW'** ಪತ್ರಿಕೆಯಿಂದ ಮತ್ತು ಶ್ರೀ ಒ. ಕೆ. ನಂಬಿಯಾರ್ ಲೇಖನವನ್ನು **'ಬಾಗಿನ'** ಅಭಿನಂದನಾ ಗ್ರಂಥದಿಂದ (೧೯೫೪) ಪಡೆಯಲಾಗಿದೆ. ಇವರಿಗೆಲ್ಲಾ 'ಅಂಕಣ'ದ ಕೃತಜ್ಞತೆಗಳು.

'ಅಂಕಣ' ನಿಮಗೆ ಸಕಾಲದಲ್ಲಿ ತಲುಪದಿದ್ದರೆ ದಯವಿಟ್ಟು ಬರೆದು ತಿಳಿಸಿ. ಇದರಿಂದ ಮುಂದಿನ ಸಂಚಿಕೆಗಳ ಅಂಚೆಯ ಬಗ್ಗೆ ಎಚ್ಚರವಹಿಸಲು ಸಾಧ್ಯವಾಗುವುದು. ಹಾಗೆಯೇ ನಿಮ್ಮ ವಿಳಾಸ ಬದಲಾದರೆ ಅದನ್ನು ಕೂಡಲೇ ತಿಳಿಸಿ. ನಮಸ್ಕಾರ.

–ಅಂಕಣ


8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು-560 003


## ಈ ಸಂಚಿಕೆಯಲ್ಲಿ

### ಲೇಖನಗಳು



### ಟಿಪ್ಪಣಿಗಳು



### ಪರಿಚಯ




ಪ್ರಕಟನೆ: **'ಪಿ. ಪಿ.' ಬಳಗದ ಗೆಳೆಯರಿಂದ**

ವಾರ್ಷಿಕ ಚಂದಾ: **ಹತ್ತು ರೂಪಾಯಿ**

# ಅಸ್ವಸ್ಥ ಸಮಾಜದಲ್ಲಿ
# ಪ್ರತಿಭೆ, ಪ್ರತಿಷ್ಠೆ, ಪ್ರತಿಷ್ಠಾನ

○

ವ್ಯಾಸರಾಯ ಬಲ್ಲಾಳ

ಬುದ್ಧಿ ಜೀವಿ ಎನ್ನುವ ಪದ ಭಾರತದಲ್ಲಿ ಹೆಚ್ಚು ಚಲಾವಣೆಯಲ್ಲಿ ಬರತೊಡಗಿದ್ದು ಪ್ರಾಯಶಃ ನಲುವತ್ತರ ದಶಕದ ಪ್ರಗತಿಶೀಲ ಸಾಹಿತ್ಯ ಚಳವಳಿ ಆರಂಭವಾದ ಮೇಲೆ. ಈಗ ಮಾತ್ರ ಈ ಶಬ್ದದ ಬಳಕೆ ತೀರ ಸಾಮಾನ್ಯವೆನಿಸುವಷ್ಟು ಪರಿಚಿತವಾಗಿದೆ. ಸ್ವಾತಂತ್ರ್ಯದ ಹೋರಾಟದಲ್ಲಿ ಬುದ್ಧಿಜೀವಿಗಳ ಪಾತ್ರವೇನಿತ್ತು? ಸ್ವಾತಂತ್ರ್ಯೋತ್ತರ ಸಮಸ್ಯೆಗಳ ನಿವಾರಣೆಯಲ್ಲಿ ಇವರು ಎಂಥ ಪಾತ್ರ ವಹಿಸಿದ್ದಾರೆ? ತುರ್ತು ಪರಿಸ್ಥಿತಿಯ ಕಾಲದಲ್ಲಿ ಇವರ ಹೊಣೆಗಾರಿಕೆಯೇನಿತ್ತು? ಇಂದಿನ ಬದಲುತ್ತಿರುವ ಪರಿಸರದಲ್ಲಿ ಇವರ ಕರ್ತವ್ಯವೇನು? ಇತ್ಯಾದಿ, ಇತ್ಯಾದಿ....ವಾಂತಿ ಬರಿಸುವಷ್ಟು....

ಆರಾಮ ಕುರ್ಚಿಯಲ್ಲಿ ಕುಳಿತು ದೇಶದ ಸಮಸ್ಯೆಗಳ ಪರಿಹಾರಕ್ಕೆ ಉಪಾಯ ಹೇಳುವಂಥ ಬುದ್ಧಿಜೀವಿಗಳು, ಭಾರತದಲ್ಲಿ ಸಿಗುವ ಪ್ರಮಾಣದಲ್ಲಿ ಬೇರಾವ ದೇಶದಲ್ಲೂ ಸಿಗಲಾರರು. ಅಸ್ಥಿರವಾದ ಬದುಕನ್ನೇ ನೆಚ್ಚಿಕೊಳ್ಳಬೇಕಾದಂಥ ಭಾರತದ ಸಾಮಾನ್ಯ ಜೀವಿಯಂತೆಯೇ ಇಲ್ಲಿ ಬುದ್ಧಿಜೀವಿ ಎನಿಸಿಕೊಳ್ಳುವವರೂ ಅಸ್ಥಿರವಾದ ವ್ಯಾವಹಾರಿಕ ಬದುಕನ್ನೇ ನೆಚ್ಚಿಕೊಂಡಿರಬೇಕಾದಂಥವರು. ಇಂಥ ಪರಿಸ್ಥಿತಿಯಿಂದಾಗಿಯೋ ಏನೋ, ಸ್ವತಂತ್ರ ವಿಚಾರಗಳಿಗೆ ಇವರು ಬದ್ಧರಾಗಿರುವುದು ತಮ್ಮ ವ್ಯಾವಹಾರಿಕ ಬದುಕಿನ ಪರಿಧಿಯಿಂದ ಹೊರಗೆ. ವಿಚಾರಕ್ಕೂ ಕ್ರಿಯೆಗೂ ಅವರು ಸಂಬಂಧವನ್ನು ಕಲ್ಪಿಸುವುದು, ಇತರರು ಆ ವಿಚಾರದ ಬೆಳಕನ್ನು ನೋಡಬೇಕು ಎನ್ನುವ ಆತುರದಿಂದ ಮಾತ್ರ. ಸ್ವಂತ-ಬದುಕಿಗೆ ಆ ವಿಚಾರದ ಗಾಂಭೀರ್ಯ ತಟ್ಟಬಹುದು ಎಂಬ ಸಂಶಯ ಬಂದಾಗಲೂ ಅವರು ನಿರ್ವೀರ್ಯರಾಗುತ್ತಾರೆ. ಇದಕ್ಕೆ ಅಪವಾದಗಳು ಇಲ್ಲವೆಂದಲ್ಲ. ಆದರೆ ಸಾಮಾನ್ಯವಾಗಿ ನಮ್ಮ ಹೆಚ್ಚಿನ ಬುದ್ಧಿಜೀವಿಗಳು ಎನಿಸುವವರ ವಿಚಾರಗಳಲ್ಲಿ ಪ್ರಾಮಾಣಿಕತೆಯ ಅಂಶ ಎಷ್ಟು ಎಂಬುದು ತುಂಬ ಕುತೂಹಲಕಾರಕ ಸಂಶೋಧನೆಗೆ ವಸ್ತುವಾಗಬಹುದು.

ಬುದ್ಧಿ ಜೀವಿ ಎನ್ನುವ ಪದ ಬರೇ ಲೇಖಕ ವರ್ಗಕ್ಕಷ್ಟೆ ಸೀಮಿತವಾಗಿಲ್ಲ. ಆತ ಸೃಜನಶೀಲ ಲೇಖಕನಾಗಿರಬಹುದು. ಪ್ರತಿಷ್ಠಿತ ಅರ್ಥ ಶಾಸ್ತ್ರಜ್ಞನಾಗಿರಬಹುದು, ಮೇಧಾವಿ ವಿಜ್ಞಾನಿಯಾಗಿರಬಹುದು, ಪ್ರತಿಭಾವಂತ ಚಿತ್ರ ಕಲಾವಿದನೋ, ಶಿಲ್ಪಿಯೊ ಆಗಿರಬಹುದು, ನಿಷ್ಣಾತ ಪತ್ರಿಕೋದ್ಯಮಿಯಾಗಿರಲೂ ಬಹುದು. ಆದರೆ ಇವರೆಲ್ಲ ಸ್ವತಂತ್ರ ಭಾರತದ ಸಾಂಸ್ಕೃತಿಕ ಮೌಲ್ಯಗಳನ್ನು ರೂಪಿಸಬೇಕಾದಂಥವರು. ನಮ್ಮ ಬದುಕಿನ ಗುರಿ-ಗಮ್ಯಗಳಿಗೆ ಅರ್ಥ ಮೂಡಿಸಬೇಕಾದಂಥವರು. ಬದಲುತ್ತಿರುವ ಸಾಮಾ

ಜಿಕ ಪರಿಸರಕ್ಕೆ ಹೊಸದೊಂದು ಸಂಸ್ಕಾರದ ತಳಪಾಯ ಹಾಕಿ ಕೊಡಬೇಕಾದಂಥವರು. ಇಂಥವರೆಲ್ಲ ಸ್ವಾತಂತ್ರ್ಯ ಬಂದ ಮೇಲೆ ನಡೆದುಕೊಂಡ ರೀತಿ ಒಂದು ಸಂಶೋಧನಾತ್ಮಕ ಪ್ರಬಂಧಕ್ಕೆ ವಸ್ತುವಾಗಬಹುದು. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ಆಡಳಿತೆಯಲ್ಲಿ ಬುದ್ಧಿ ಜೀವಿಗಳಿಗೆ ರಾಜಾಶ್ರಯವಿರಲಿಲ್ಲ. ಆಗ, ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಿದ್ದ ಕಾಲದಲ್ಲಿ, ಯಾವ ಆಸೆ ಆಮಿಷಗಳೂ ಪ್ರತಿಭೆಗೆ ಪ್ರೋತ್ಸಾಹ ಕೊಡುವಂತಿರಲಿಲ್ಲ. ಸ್ವಾತಂತ್ರ್ಯವೇ ಆಗ ಆದರ್ಶವಾಗಿತ್ತು. ಅದು "ರೊಮ್ಯಾಂಟಿಕ್" ಆದರ್ಶವಾಗಿದ್ದಿರಬಹುದು. ಆದರೆ ಅಂಥ ಆದರ್ಶದಲ್ಲೂ ಈಗ ಕಂಡುಬರುತ್ತಿರುವುದಕ್ಕಿಂತ ಹೆಚ್ಚಿನ ಪ್ರಾಮಾಣಿಕತೆ ಇರಲಿಲ್ಲವೇ ಎಂಬ ಸಂಶಯ ತರುವಂತಿದೆ ಇಂದಿನ ಪರಿಸ್ಥಿತಿ. ಬ್ರಿಟಿಷ್ ಸರಕಾರದ "ಸೆನ್ಸಾರ್" ಕತ್ತರಿಗೆ ಮಣಿಯುವುದಿಲ್ಲವೆಂದು 'ಭದ್ರತೆ'ಯ ಹಣ ಕಳೆದುಕೊಂಡ ಸಂಪಾದಕರಿದ್ದರು; ಸೆರೆಮನೆ ಕಂಡ ಸಂಪಾದಕರಿದ್ದರು ; ಸಂಪಾದಕೀಯ ಬರಹ ವಿಲ್ಲದೇನೇ (ಬಹಿಷ್ಕಾರ ಸೂಚಿಸಲೆಂದು) ಪತ್ರಿಕೆ ಪ್ರಕಟಿಸಿದ್ದ ಸಂಪಾದಕರಿದ್ದರು. ಆದರೆ ಸ್ವತಂತ್ರ ಭಾರತದ ಪರಿಸ್ಥಿತಿಯೇನು ? ಇಂದು ಪತ್ರಿಕೆಗಳು ಹೆಚ್ಚಿವೆ. ಪ್ರಸಾರ ಹೆಚ್ಚಿದೆ. ಓದುಗರ ತಿಳಿವಳಿಕೆಯ ಮಟ್ಟ, ರಾಜಕೀಯ ಪ್ರಜ್ಞೆ ಹೆಚ್ಚು ಪಕ್ವವಾಗಿವೆ. ಟೀಕೆ.... ಟೀಕೆ ಕೂಡಾ ಹೆಚ್ಚು ಅಭ್ಯಾಸಪೂರ್ಣವೂ, ಮೊನಚಾದುದೂ, ವಸ್ತುನಿಷ್ಠವೂ, ಕೆಲವೊಮ್ಮೆ ರಚನಾತ್ಮಕವಾದುದೂ ಆಗಿದೆ....ಅಷ್ಟೆ. ಆದರೆ ಟೀಕೆ, ಟೀಕೆಯಾಗಿಯೇ ಉಳಿಯುವುದರಲ್ಲೆ ಪತ್ರಿಕಾ ಧರ್ಮದ ಅಂತಿಮ ಗುರಿಯೆಂದು ಭಾಸವಾಗುವಂತಿದೆ, ಪತ್ರಕರ್ತರ ನಡತೆ. ಎಂದರೆ, ಇಂದಿನ ರಾಷ್ಟ್ರೀಯ ವ್ಯವಸ್ಥೆಯ ಹುಳುಕುಗಳನ್ನಷ್ಟೆ ತೋರಿಸುವಷ್ಟೆ ನಮ್ಮ ಕೆಲಸವೆಂಬ ತಿಳಿವಳಿಕೆ, ಆರಾಮ ಕುರ್ಚಿಯ ಟೀಕೆಯೂ ಆಗಿ ಉಳಿಯುವ ಸಂಭವ ಹೆಚ್ಚು. ಇಂಥ ಬುದ್ಧಿ ಜೀವಿಗಳೇ ರಾಷ್ಟ್ರದ ಪ್ರಚಲಿತ ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡವರು. ಒಂದು ಭಾಗಲ್ಪುರ್, ಒಂದು ಭಾಗಲ್ಪುರ ಬೆಳಕಿಗೆ ಬರುವಾಗ 'ಅಯ್ಯೋ ದೇವರೇ' ನಮ್ಮ ವ್ಯವಸ್ಥೆಯಲ್ಲಿ ಇಂಥ ಕಂದಕಗಳೂ ಇವೆಯೆ? ಎಂಬ ಭಾವನೆ ಸಾರ್ವತ್ರಿಕವಾಗಿ ಕೆಲಕಾಲ ಹರಡುವಷ್ಟು ನಾವು ಬೊಬ್ಬಿಡಬಹುದು.... ಆದರೆ ಈ ನೋವು ಒಂದು ಅಸ್ವಸ್ಥ ಸಮಾಜದ ರೋಗಗಳ ನೋವು, ಇಂಥ ನೋವು ಕ್ರಿಯಾಶೀಲತೆಗೆ ದಾರಿ ಮಾಡಬಹುದೇ, ಈ ರೋಗಕ್ಕೆ ಶಸ್ತ್ರಕ್ರಿಯೆ ಸಾಧ್ಯವಾಗಬಹುದೇ, ಅದನ್ನು ಸಾಧಿಸ ಬಹುದೇ ಎಂದು ಪತ್ರಕರ್ತರಾಗಲೀ ಬೇರೆ ಬುದ್ಧಿಜೀವಿಗಳಾಗಲೀ ಯೋಚಿಸುವುದಿಲ್ಲ. ಹಾಗೆ ಯೋಚಿಸಿದಾಗ ಮಾತ್ರ ನಾವು ನೆಚ್ಚಿಕೊಂಡಿರುವ, ಅಥವಾ ನೆಚ್ಚಿಕೊಳ್ಳ ಬಯಸುವ ಮೌಲ್ಯಗಳಿಗೆ ಪ್ರಾಮಾಣಿಕತೆಯ ಲೋಪ ಬರುತ್ತದೆ. ಪ್ರಾಮಾಣಿಕವಾದ ನೋವು ಕ್ರಿಯಾಶೀಲವಾಗದೆ ಉಳಿಯುವುದು ಸಾಧ್ಯವೇ ಇಲ್ಲ. ಪ್ರಾಮಾಣಿಕವಾದ ಬುದ್ಧಿಜೀವಿ ಕ್ರಿಯಾಶೀಲವಾದಾಗ, ಅಲ್ಲಿ ಭಯದ ಸುಳಿವಿಲ್ಲ. ವ್ಯವಸ್ಥೆಯನ್ನೆ ಇದಿರಿಸುವುದರಿಂದ ವ್ಯಾವಹಾರಿಕ ಸ್ವಾರ್ಥಕ್ಕೆ ಹಾನಿಯುಂಟಾಗಬಹುದೇ

ಎಂಬ ಭೀತಿಯಿಲ್ಲ. ಆತ ವಿರೋಧಿಸುವುದು ಅನ್ಯಾಯವನ್ನು, ದೌರ್ಜನ್ಯವನ್ನು, ಅಸತ್ಯವನ್ನು.... ಆತ ಸ್ವಷ್ಟಿಸುವುದು ಎಲ್ಲ ಕಡೆ ವರ್ಚಸ್ಸನ್ನು ಕೆಡವಬಹುದಾದ, ಎಲ್ಲ ನೆಚ್ಚಿಕೊಳ್ಳಬಹುದಾದ ಮಾನವೀಯ ಮೌಲ್ಯಗಳನ್ನು.

ಭಗಪತ್, ಭಾಗಲ್ಪುರಗಳನ್ನು ಉಲ್ಲೇಖಿಸಲು ಕಾರಣವಿಷ್ಟೆ. ಉತ್ತರ ಪ್ರದೇಶದಲ್ಲಾಗಲೀ, ಬಿಹಾರದಲ್ಲಾಗಲೀ, ಅಥವಾ ನಾವು ಯಾವುದನ್ನು 'ಹಿಂದೀ ಖಂಡ'ವೆಂದು ಕರೆಯುತ್ತೇವೆಯೋ ಆ ಭಾಗದ ಬುದ್ಧಿಜೀವಿಗಳೆನಿಸಿಕೊಂಡವರಿಗೆ- ಲೇಖಕರು, ಕವಿಗಳು, ವಿಜ್ಞಾನಿಗಳು, ಇವರಿಗೆಲ್ಲ ಈ ನೋವಾಗಲೀ, ಅಥವಾ ಇನ್ನಾವುದೇ ಇಂಥ ನೋವಾಗಲೀ ತಟ್ಟಿವೆಯೆ? ತಟ್ಟಿದ್ದರೆ, ಕ್ರಿಯಾಶೀಲ ಪ್ರತಿಭಟನೆಯ ದಾರಿ ಏನಾದರೂ ಇದೆಯೆ ಎಂದು ಇವರು ಚಿಂತಿಸಿದ್ದಾರೆಯೆ? ವೃತ್ತಪತ್ರಗಳಿಂದ ಏನೂ ತಿಳಿದು ಬರುತ್ತಿಲ್ಲ. 'ಪೋಲೀಸು ದೌರ್ಜನ್ಯ'ವೆಂಬ ಒಂದೇ ಮಾತಿನಲ್ಲಿ ಇಂಥ ಘಟನೆಗಳನ್ನು ಖಂಡಿಸುವುದಕ್ಕಿಂತ ಹೆಚ್ಚಿನ ಆಸಕ್ತಿ ವಹಿಸಿ, ಇಂಥ ಘಟನೆಗಳು ನಡೆಯುವ ಸಮಾಜದಲ್ಲಿರುವ ರೋಗಗ್ರಸ್ಥ ವ್ಯವಸ್ಥೆಯೇ ಖಂಡನಾರ್ಹವಾದದ್ದು, ಆ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಸೂಚಿಸುವುದು ಬುದ್ಧಿಜೀವಿಗಳ ಕರ್ತವ್ಯವೆಂದು ಬಗೆದವರೆಷ್ಟೋ. ಬ್ರಿಟಿಷ್ ಆಡಳಿತೆಯ ಪತ್ರಿಕಾ ನೀತಿಯನ್ನು ನಿಷೇಧಿಸಿ, ಆಡಳಿತೆಯ ಅಧಿಕಾರದ ದುರುಪಯೋಗವನ್ನು ನಿಷೇಧಿಸಿ, ಸಂಪಾದಕೀಯ ಬರೆಯುದೇನೇ, ಖಾಲಿ ಜಾಗ ತೋರಿಸಿ ಪತ್ರಿಕೆ ಪ್ರಕಟಿಸುವ ಧೈರ್ಯವನ್ನು ಅಂದಿನ ಕೆಲವು ಪತ್ರಿಕೆಗಳು ತೋರುತ್ತಿದ್ದವು...... ಆದರೆ ಇಂದಿನ ಪರಿಸ್ಥಿತಿಯೆ ಬೇರೆ.... ಭಾಗಪತ್, ಭಾಗಲ್ಪುರಗಳ ವಿರುದ್ಧ ಸಂಪಾದಕೀಯ ಬರೆಹಗಳು ಭಾರತದ ಹೆಚ್ಚಿನ ಪತ್ರಿಕೆಗಳಲ್ಲಿ ಪ್ರಕಟವಾಗಬಹುದು, ಆದರೆ ಒಂದು ಪ್ರಾದೇಶಿಕ ಘಟನೆಯ ವಿವೇಚನೆಯಾಗಿ ಅಷ್ಟೆ. ಇಂದು ಎಂಥ 'ಅನ್ಯಾಯ'ವೂ ಪ್ರದೇಶಿಕವಾದುದಾಗಿ ಬಿಡುತ್ತದೆ. ಅದರ ಕಾರ್ಯ-ಕಾರಣ ಜಿಜ್ಞಾಸೆಗಿಳಿಯುವುದಕ್ಕೆ ಮೊದಲೇ ನಾವು ಸರಳೀಕೃತ ಪರಿಹಾರ ಸೂಚಿಸ ಬಯಸುತ್ತೇವೆ... 'ಪೋಲೀಸು ದೌರ್ಜನ್ಯ'.... 'ಅನಾಗರಿಕ ಪ್ರವೃತ್ತಿ'.... 'ಸಮಾಜ ವಿರೋಧೀಕೃತ್ಯ' ಇತ್ಯಾದಿ.... ಸಾಮಾನ್ಯರು ಇಂಥ ಮಾತು ಆಡುವಾಗ ನೋವೆನಿಸುವುದಿಲ್ಲ. ಬುದ್ಧಿಜೀವಿಗಳು ಎನಿಸಿಕೊಳ್ಳಬೇಕಾದವರು, ಎಂದು ಕರೆದುಕೊಳ್ಳುವವರು ಇಂಥ ಅಪರಾಧಗಳಿಗೆ ನಾವೂ ಹೊಣೆಗಾರರೇ ಎಂದು ಯೋಚಿಸಿದಾಗ, ಪ್ರತಿಷೇಧ ವ್ಯಕ್ತಪಡಿಸದೆ ಇರುವಾಗ ನೋವಾಗುತ್ತದೆ. ಯಾವ ರೀತಿಯ ಪ್ರತಿಷೇಧ, ಎಂಥ ಪ್ರತಿಷೇಧ ಎಂಬ ಪ್ರಶ್ನೆ ಸಹಜವಾಗಿಯೇ ಕೇಳಬಹುದು.... 'ಅನ್ಯಾಯ' ನಡೆದಾಗ ಸರಕಾರ ತನಿಖಾ ಆಯೋಗ ನೇಮಿಸುತ್ತದೆ. ಅದು ವರದಿಯೊಪ್ಪಿಸುತ್ತದೆ. ಈ ವರದಿಯನ್ನು ಸರಕಾರ ಪರಿಶೀಲಿಸುತ್ತದೆ. ಪರಿಶೀಲಿಸಿದ ಮೇಲೆ ಅದನ್ನು ಒಪ್ಪಿಕೊಳ್ಳಬಹುದು, ಒಪ್ಪಿಕೊಳ್ಳದೆ ಇರಬಹುದು. ಅಪರಾಧಿಗಳೆಂದು ಪರಿಗಣಿಸಲಾದ ಅಧಿಕಾರಿಗಳಿಗೋ ಮತ್ತಿತರರಿಗೋ ಅವರವರ ವರ್ಚಸ್ಸನ್ನು ಹೊಂದಿಕೊಂಡು, ವರ್ಗವೋ, ಅಮಾನತೋ, ಕೆಲಸದಿಂದ ವಜಾವೋ

ಆಗುತ್ತದೆ. ಮತ್ತೊಮ್ಮೆ ಇಂಥ 'ಅನ್ಯಾಯ' ಬೆಳಕಿಗೆ ಬರುವ ತನಕ ನಿಶ್ಚಿಂತೆ.... ಇಂಥ ಅನ್ಯಾಯ ನಡೆಯಲು ಎಡೆಗೊಡುವ ವ್ಯವಸ್ಥೆಯನ್ನೇ ಬದಲಿಸಲು ಕ್ರಮ ತೆಗೆನುಕೊಳ್ಳುವ ತನಕ ನಾವು ಸುಮ್ಮನಿರುವುದಿಲ್ಲ ಎಂದು ಯಾವ ಪತ್ರಿಕಾಕರ್ತನೂ ಹೇಳುವುದಿಲ್ಲ, ಯಾವ ಸಾಹಿತ್ಯದ ಸಂಘಟನೆಯೂ ಹೇಳುವುದಿಲ್ಲ... ಯಾವ ವಿಜ್ಞಾನಿಯೂ ದನಿಗೂಡಿಸುವುದಿಲ್ಲ.... ಇಲ್ಲಿ ಮೌಲ್ಯ ಪ್ರಜ್ಞೆ ಅವರನ್ನು ಕಾಡುವುದಿಲ್ಲ.... ಅವರು ನೋಡುವುದು ಪ್ರಾದೇಶಿಕವಾದ ಒಂದು ಅನ್ಯಾಯವನ್ನು ಮಾತ್ರ.

ಇದೆಲ್ಲ ತೀರ ಸಹಜವೆನಿಸುವಂತೆ, ಸ್ವಾತಂತ್ರ್ಯ ಬಂದ ನಂತರ ನಮ್ಮ ನಾಡಿನಲ್ಲಿ ನಡೆದ ಹಲವಾರು ದುರಂತಗಳು ಸಾಕ್ಷಿ ಹೇಳುತ್ತವೆ. ಸ್ವಾತಂತ್ರ್ಯದ ಬೆನ್ನಲ್ಲೆ ಬಂದ ಮಿಲಿಯಗಟ್ಟಲೆ ಜನರ, ಕೊಲೆ, ಸುಲಿಗೆ, ಮಾನಭಂಗ ಸ್ಥಳಾಂತರಗಳೂ ನಮ್ಮ ಮೌಲ್ಯ ಪ್ರಜ್ಞೆಯನ್ನು ಅಷ್ಟಾಗಿ ಕೆಣಕಲೇ ಇಲ್ಲವೆಂದಾದ ಮೇಲೆ, ಅಹಮ್ಮದಾಬಾದ್, ಜಮ್‌ಶೆಡ್‌ಪುರ, ಅಲಿಗಢ, ಮೊರಾದಾಬಾದ್‌ಗಳ ಮಾತೇಕೆ? ಮುಖ್ಯವಾಗಿ ಬುದ್ಧಿಜೀವಿಗಳೆನಿಸಿಕೊಂಡವರನ್ನೇ ಉದ್ದೇಶಿಸಿ ಈ ಮಾತು ಹೇಳಬೇಕಾಗುತ್ತದೆ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಇಡಿಯ ವಿಶ್ವವನ್ನೆ ನಡುಗಿಸಿದ ಫ್ಯಾಸಿಸ್ಟ್ ಶಕ್ತಿಗಳ ವಿರುದ್ಧ ಹೋರಾಡಿದ್ದ ಜನತೆಯ ಸಾಹಸವನ್ನು ಚಿತ್ರಿಸಿದ್ದ ಸೃಜನಶೀಲ ಕೃತಿಗಳೆಷ್ಟೊ. ಆದರೆ ನಮ್ಮ ನಾಡಿನ ವಿಭಜನೆಯ ಮಹಾದುರಂತದ ಬೆನ್ನಲ್ಲಿ ಇಂಥ ಕೃತಿಗಳು ಎಷ್ಟು ಬಂದಿವೆ, ಈ ದುರಂತದ ಯಾವ ರೀತಿ ನಮ್ಮ ಬುದ್ಧಿಜೀವಿಗಳ, ಸೃಜನ ಶೀಲ ಲೇಖಕರ ಸಾಮಾಜಿಕ ಪ್ರಜ್ಞೆಯನ್ನೂ ಮೌಲ್ಯ ಪ್ರಜ್ಞೆಯನ್ನೂ ಕೆಣಕಿದೆಯೆಂದು ಕೇಳುವ ಮನಸ್ಸಾಗುತ್ತಿದೆ. ಹಿಂದೀ ಖಂಡದಲ್ಲಿ ಅಂಥ ಮಹತ್ವದ ಕೃತಿಗಳು ಬಂದಿದ್ದರೂ(!) ಅವು ವಿಂಧ್ಯವನ್ನು ದಾಟಿ ದಕ್ಷಿಣಕ್ಕೆ ಬರುವಷ್ಟು ಪ್ರಭಾವಶಾಲಿಯಾಗಿರಬೇಕಿತ್ತು. ಆದರೆ ಬಂದಿವೆಯೆ! ಎರಡನೆಯ ಮಹಾಯುದ್ಧವೇ ಯೂರೋಪಿಯನ್ ಲೇಖಕರು ಕಳೆದುಕೊಂಡ ದೊಡ್ಡ ಅವಕಾಶಗಳಲ್ಲೊಂದು ಎಂದು ಸುಪ್ರಸಿದ್ಧ ಫ್ರೆಂಚ್ ತತ್ವಜ್ಞಾನಿ, ಲೇಖಕ ದಿವಂಗತ ಸಾತ್ರ್ ಹಿಂದೊಮ್ಮೆ ಹೇಳಿದ್ದ ಮಾತನ್ನು ಈ ಸಂದರ್ಭದಲ್ಲಿ ಭಾರತಕ್ಕೆ ಅನ್ವಯಿಸುವಾಗ, ಇಲ್ಲಿ ಪ್ರಾಮಾಣಿಕರಾದ ಬುದ್ಧಿಜೀವಿಗಳಿದ್ದಾರೆಯೆ ಎಂದು ಕೇಳುವ ಮನಸ್ಸಾಗುತ್ತಿದೆ. ಈ ಶತಮಾನದ ಇಷ್ಟೊಂದು ದೊಡ್ಡ ದುರಂತ, ಆಗಿನ ಪೂರ್ವ ಪಾಕಿಸ್ತಾನದಲ್ಲಿ(ಬಾಂಗ್ಲಾ) ನಡೆದಾಗಲೂ ಭಾರತದ ಕೆಲವು ಪತ್ರಿಕಾಕರ್ತರಿಗಷ್ಟೆ ಈ ನೋವು ತಗಲಿತ್ತು; ಇತರ ಬುದ್ಧಿಜೀವಿಗಳಿಗಲ್ಲ. ದೊಡ್ಡ ದುರಂತ, ರಾಷ್ಟ್ರೀಯ ಅನಾಹುತವೆನಿಸಬಹುದಾದ, ವಿಭಜನೆ, ಬಾಂಗ್ಲಾ ವಿಮೋಚನೆಗಳೆ ನಮ್ಮ ಬುದ್ಧಿಜೀವಿಗಳನ್ನು ತಟ್ಟಬೇಕಾದ ರೀತಿಯಲ್ಲಿ ತಟ್ಟಲು ಅಸಮರ್ಥವಾಗುವಾಗ, ಭಾಗಪತ್, (ಅಕ್ರಮಣ, ಹಿಂಸೆ), ಭಾಗಲ್ಪುರ (ಅಮಾನುಷ ದೌರ್ಜನ್ಯ) ಅಹಮ್ಮದಾಬಾದ್, ಮೊರಾದಾಬಾದ್ (ಜಾತೀಯತೆ) ಇವು ತಟ್ಟಿಯಾವು ಎಂದು ಹೇಳುವುದು ಧಾರ್ಷ್ಟ್ಯದ ಮಾತಾಗಬಹುದು.

ಆದರೂ ನಮ್ಮಲ್ಲಿ ಬುದ್ಧಿಜೀವಿಗಳಿದ್ದಾರೆ. ಸೃಜನಶೀಲ ಲೇಖಕರಿದ್ದಾರೆ, ಪತ್ರಕರ್ತರಿದ್ದಾರೆ. ನಿರ್ಮಾಪಕರಿದ್ದಾರೆ, ಅರ್ಥಶಾಸ್ತ್ರಜ್ಞರಿದ್ದಾರೆ, ವಿಜ್ಞಾನಿಗಳಿದ್ದಾರೆ.... ಎಲ್ಲ ನಮ್ಮ ಸಾಮಾಜಿಕ ಜೀವನದ ಭಿನ್ನ ಭಿನ್ನ ಘಟಕಗಳೆನಿಸುವಷ್ಟು ಒಬ್ಬರಿಗೊಬ್ಬರು ಅಪರಿಚಿತರಿದ್ದಾರೆ. ನಮ್ಮ ಸಾಮಾಜಿಕ ಜೀವನದ ಮೇಲೆ ಪರಿಣಾಮ ಮಾಡಬಹುದಾದ, ಮಾಡುತ್ತಿರುವ, ವರ್ಚಸ್ಸು, ಕೆಡವುತ್ತಿರುವ ವಿವಿಧ ಸಂಸ್ಕೃತಿ, ಸಂಸ್ಕಾರಗಳ ಬಗ್ಗೆ ಅಭಿಪ್ರಾಯಗಳು ನಮಗೆ ಧಾರಾಳ ಸಿಗುತ್ತಿವೆ. ನಮ್ಮ ನಾಡಿನ ಎಲ್ಲ ಸಮಸ್ಯೆಗಳಿಗೂ ವಿಮೋಚನೆಯ ದಾರಿ ಏನೆಂದೂ ಉಪದೇಶ ಸಿಗಬಹುದು. ನಮ್ಮ ಸಾಮಾಜಿಕ ಶಾಪಗಳೆಲ್ಲವುಗಳ ಸ್ಪಷ್ಟ ವಿವೇಚನೆ ನಡೆಸಲು ಇವರು ಸಮರ್ಥರು. ವ್ಯಕ್ತಿಯ ನೋವಿಗೆ ಕಾರಣವಾಗುವ ಆತನ ಅಂತರಂಗದ ಕುರಿತ ಜಿಜ್ಞಾಸೆಗೆ ಸಾವಿರ ಪ್ರಮಾಣಗಳನ್ನು ಇವರು ಒದಗಿಸಬಲ್ಲರು. ವಿಜ್ಞಾನ, ಪೂರ್ವ ಪಶ್ಚಿಮಗಳು ಮುಖ್ಯವಾಗಿ ಪಶ್ಚಿಮದ ದರ್ಶನಶಾಸ್ತ್ರ, ತಾತ್ವಿಕ ಚಿಂತನೆ, ಅನುಭವ ಎಲ್ಲ ಇವರ ವಾದಗಳಿಗೆ ಬೆಂಗಾವಲಾಗಿ ನಿಲ್ಲುತ್ತವೆ. ಆದರೆ ಸಾಮೂಹಿಕವಾಗಿ, ನಮ್ಮ ಸಾಮಾಜಿಕ ಅನಿಷ್ಟಗಳಿಗೆ ಸ್ಪಂದಿಸುವುದು ಅಗತ್ಯವೇ ಎಂದು ಇವರು ಚಿಂತಿಸುವುದೇ ಇಲ್ಲ. ನಾವೇ ಸೃಷ್ಟಿಸುತ್ತಿರುವ ಇತಿಹಾಸ ಇವರ ದೃಷ್ಟಿಪಥದಲ್ಲಿ ಗೋಚರಿಸುವುದೇ ಇಲ್ಲ. ಗೋಚರಿಸಿದರೂ ಅದು ವಿಧಿಯಾಗಿ ಬರುತ್ತದೆ.... ಪಂಥಾಹ್ವಾನವಾಗಿ ಅಲ್ಲ.... ನಮ್ಮ ಇದಿರಲ್ಲೆ ಇತಿಹಾಸ ರೂಪುಗೊಳ್ಳುತ್ತಿರುವಾಗಲೂ ನಾವೇ ಅದನ್ನು ರೂಪಿಸುತಿದ್ದೇವೆ ಎನ್ನುವ ಭಾವನೆ ಬುದ್ಧಿಜೀವಿಗಳನ್ನೇ ತಟ್ಟದಿರುವಾಗ ಸಾಮಾನ್ಯರನ್ನು ತಟ್ಟುವ ಮಾತೇ ಹೊರಡುವುದಿಲ್ಲ.

ಇತಿಹಾಸ ಯಾವ ರೀತಿ ರೂಪುಗೊಳ್ಳುತ್ತಿದೆ! ನಾವು ನಮ್ಮ ಸುತ್ತಲಿನ ಪರಿಸರಕ್ಕೆ ಸ್ಪಂದಿಸುವ ಬಗೆಯಲ್ಲಿ, ನಮ್ಮ ಆಸೆ ಆಮಿಷಗಳನ್ನು ಪ್ರಕಟಿಸುವ ಬಗೆಯಲ್ಲಿ, ನಮ್ಮ ವೈಯಕ್ತಿಕ, ಸಾಮಾಜಿಕ ಕಟ್ಟುಪಾಡುಗಳಿಗೆ ಪ್ರತಿಕ್ರಿಯೆ ತೋರಿಸುವ ಬಗೆಯಲ್ಲಿ, ನಮ್ಮ ಮೂಲಭೂತವೆನಿಸಬಹುದಾದ ವಿಚಾರಕ್ರಮದ ಬಗೆಯಲ್ಲಿ, ನಮ್ಮ ಸ್ವಾರ್ಥದಲ್ಲಿ, ನಮ್ಮ ಅಸೂಯೆಯಲ್ಲಿ, ನಮ್ಮ ಸಣ್ಣತನದಲ್ಲಿ, ನಮ್ಮ ಕ್ರೌರ್ಯ, ದೌರ್ಜನ್ಯಗಳಲ್ಲಿ, ನಮ್ಮ ಅನುಕಂಪದಲ್ಲಿ, ನಾವು ದೊಡ್ಡವರಾದೇವೇನೋ ಎಂಬ ನಮ್ಮ ಕನಸಿನಲ್ಲಿ, ನಮ್ಮ ಸ್ನೇಹದಲ್ಲಿ, ನಮ್ಮ ಕಲಹದಲ್ಲಿ (ಅಂತಃಕಲಹದಲ್ಲಿ), ಆಧುನಿಕ ಜೀವನಕ್ರಮಕ್ಕೆ ಸ್ಪಂದಿಸುವ ನಮ್ಮ ಪರಿಸರಕ್ಕೆ ಹೊಂದಿಕೊಳ್ಳಲು ಹಂಚಿಕೆ ಹುಡುಕುವ ನಮ್ಮ ಅವಸರದಲ್ಲಿ, ನಮ್ಮ ಆಚಾರ-ವಿಚಾರಗಳ ನಡುವಿನ ಕಂದಕದಲ್ಲಿ, ನಾವು ಬದುಕಿ ಉಳಿಯಲು ಹೂಡುವ ಹಂಚಿಕೆಗಳಲ್ಲಿ, ನಾವು ನಮ್ಮ ಸುಖವನ್ನೋ, ದುಃಖವನ್ನೋ ಹಂಚಿಕೊಳ್ಳುವ ಬಗೆಯಲ್ಲಿ, ನಮ್ಮ ಪ್ರಾಮಾಣಿಕತೆ, ಅಪ್ರಾಮಾಣಿಕತೆಗಳಲ್ಲಿ, ನಮ್ಮ ಇತಿಹಾಸ ರೂಪುಗೊಳ್ಳುತ್ತಿದೆ. ಅದು ನಮ್ಮ ಸಂವಿಧಾನದಿಂದಲ್ಲ, ಪಾರ್ಲಿಮೆಂಟರಿ ಪದ್ಧತಿಯೋ ಅಧ್ಯಕ್ಷೀಯ ಪದ್ಧತಿಯೋ ಎನ್ನುವ ಸಂದೇಹದಲ್ಲಲ್ಲ, ನಮ್ಮ ರಾಜಕೀಯ ಪುಡಾರಿಗಳಿಂದಲ್ಲ, ನಮ್ಮ ಪಂಚ

ವಾರ್ಷಿಕ ಯೋಜನೆಗಳಿಂದಲ್ಲ, ನಮ್ಮ ಚುನಾವಣೆಗಳಿಂದ, ನಮ್ಮ ಚುನಾಯಿತ ಪ್ರತಿನಿಧಿಗಳಿಂದಲ್ಲ, ನಮ್ಮ ಮಂತ್ರಿ, ರಾಜ್ಯಮಂತ್ರಿ, ಉಪಮಂತ್ರಿಗಳಿಂದಲ್ಲ. ನಾವು ಬದುಕುವ ರೀತಿಯಲ್ಲಿ ನಮ್ಮ ಇತಿಹಾಸ ರೂಪುಗೊಳ್ಳುತ್ತಿದೆ. ಇತಿಹಾಸದ ಬಳುವಳಿಯಾಗಿ ಬಂದ ಸಾಮಾಜಿಕ ವ್ಯವಸ್ಥೆಯಲ್ಲಿ, ಇತಿಹಾಸದ ಬಳುವಳಿಯಾಗಿ ಬಂದ ಜೀವನಕ್ರಮದಲ್ಲಿ, ಪಡೆದ ಸಂಸ್ಕಾರಗಳಲ್ಲಿ, ನಾವು ನಮ್ಮ ಸುತ್ತ ಮುತ್ತಣ ಪರಿಸರಕ್ಕೆ ಸ್ಪಂದಿಸುವ ಬಗೆ ನಿರ್ಧಾರವಾಗುತ್ತದೆ. ಹಾಗೆ ಸ್ಪಂದಿಸುತ್ತಲೇ ನಮ್ಮ ಭೌಗೋಲಿಕ ಪರಿಸರ, ಭಾಷೆ, ಬಾಂಧವ್ಯ, ಇತಿಹಾಸದ ಬಳುವಳಿಯಾಗಿ ಬಂದು ನಾವು ಅನಿವಾರ್ಯವಾಗಿ ಇದಿರಿಸಲೇಬೇಕಾದ ನಮ್ಮ ಸಮಾಜದ ಅರ್ಥ ವ್ಯವಸ್ಥೆ, ವರ್ಗ ವ್ಯವಸ್ಥೆ, ಇವುಗಳಿಗೆ ನಮ್ಮನ್ನು ಹೊಂದಿಸಿಕೊಂಡು ಬದಲಾಗಲು, ಬದಲಾಗದೆಯೂ ಬದಲಾಗಲು, ಬದಲುತ್ತಲೇ ಮುಂದುವರಿಯಲು ನಾವು ಪಡುವ ಸಂಕಟದಲ್ಲಿ, ನಮ್ಮ ತೊಳಲಾಟದಲ್ಲಿ ನಮ್ಮ ಇತಿಹಾಸ ರೂಪುಗೊಳ್ಳುತ್ತಿದೆ. ನಮ್ಮ ಮೌಲ್ಯಗಳ ನಿರ್ಧಾರವಾಗುವುದೂ ಇಲ್ಲೇ. ಇಂಥ ಸ್ಪಂದನದ ಸಾಮೂಹಿಕ ಪ್ರತಿಕ್ರಿಯೆಯೇನೋ ಎನ್ನುವಂತೆ ಕಾಲಕಾಲಕ್ಕೆ ಒಬ್ಬ ಗಾಂಧಿ, ಒಬ್ಬ ನೆಹರೂ ಹುಟ್ಟಿಕೊಳ್ಳಬಹುದು. ಅವರು ಇತಿಹಾಸದ ಗತಿಯನ್ನು ಸೂಚಿಸಲು (ನಿರ್ಧರಿಸಲು ಅಲ್ಲ) ಸ್ವಲ್ಪ ಮಟ್ಟಿಗೆ ಸಹಾಯ ಮಾಡಲೂಬಹುದು ಆದರೆ.... ಇತಿಹಾಸದ ಗತಿಯ ನಿರ್ಧಾರವಾಗುವುದು ನಾವು ಬದುಕುವ ರೀತಿಯಲ್ಲೇ.

ಈಗ ಮಾತ್ರ ನಾವು ಬದುಕುವ ರೀತಿಗೂ ಬುದ್ಧಿ ಜೀವಿಗಳಿಗೂ ಏನು ಸಂಬಂಧ ಎಂಬ ಪ್ರಶ್ನೆಗೆ ದೊರಕುವ ಉತ್ತರ ಕುತೂಹಲದ್ದಾಗಿರುತ್ತದೆ. ತುಂಬ ಪ್ರಸಿದ್ಧಿಯನ್ನು ಪಡೆದು, ತುರ್ತು ಪರಿಸ್ಥಿತಿ ಕಳೆದ ಮೇಲೆ ಜನತಾ ಸರಕಾರ ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ ಒಂದು ಗ್ರಂಥವನ್ನು ಬರೆದು ಸಾಕಷ್ಟು ಹಣವನ್ನೂ ಹೆಸರನ್ನೂ ಗಳಿಸಿದ ಒಬ್ಬ ಪತ್ರಿಕೋದ್ಯಮಿ ಅದೇ ಸಂದರ್ಭದಲ್ಲಿ ಭಾರತದ ಬುದ್ಧಿಜೀವಿಗಳನ್ನು ಉದ್ದೇಶಿಸಿ ಒಂದು ಮಾತು ಆಡಿದ್ದು ನೆನಪಿಗೆ ಬರುತ್ತದೆ. "ನಾವು ನಮ್ಮ ಚಿಂತನೆಯಲ್ಲಿ, ನಡತೆಯಲ್ಲಿ. ವಿಚಾರಗಳಲ್ಲಿ, ಜೀವನಕ್ರಮದಲ್ಲಿ ವರ್ಗೋತ್ತಮ (elitist) ಕಲ್ಪನೆಯನ್ನು ಎಷ್ಟು ಬೇಗ ಬಿಟ್ಟುಕೊಡುತ್ತೇವೆಯೋ ಅಷ್ಟು ಒಳ್ಳೆಯದು" ಎಂದು. ಅವರು ಆ ಮಾತನ್ನೂ ಹೇಳಬೇಕಾಗಿರಲಿಲ್ಲ. ನಮ್ಮ ವಿಚಾರಗಳಿಗೂ ನಡತೆಗೂ ಪ್ರಾಮಾಣಿಕವಾದ ಸಂಬಂಧ ಇರಬೇಕು ಎಂದು ಹೇಳಿದ್ದರೆ ಸಾಕಿತ್ತು–ಮುಖ್ಯವಾಗಿ ಬುದ್ಧಿಜೀವಿಗಳನ್ನುದ್ದೇಶಿಸಿ ಯಾರಿಗೆ ನಮ್ಮ ರೋಗಿಷ್ಠ ಸಮಾಜದ ಕೊರತೆಗಳು ನಿತ್ಯ ನೋವು ಕೊಡುತ್ತಿರಬೇಕೋ, ಯಾರಿಗೆ ನಮ್ಮ ಸಮಾಜ ಜೀವನವನ್ನು ನಿಯಂತ್ರಿಸುವ ಶಕ್ತಿಯನ್ನು ನಮ್ಮಿಂದಲೇ ಪಡೆದವರು, ಆ ರೀತಿ ಅಧಿಕಾರದಲ್ಲಿರುವವರು ನಡೆದುಕೊಳ್ಳುತ್ತಿರುವ ರೀತಿ ತೀರ ಅಸಹ್ಯವೆಂದು ಕಾಣುತ್ತಿರಬೇಕೋ, ಯಾರಿಗೆ ನಮ್ಮ 'ಸಮಾಜ' 'ಸಾಮಾಜಿಕ ಪ್ರಜ್ಞೆ' ಇಂಥ ಶಬ್ದಗಳಿಗೆ ಏನಾದರೂ ಅರ್ಥವಿದೆಯೆ, ನಮ್ಮಲ್ಲಿರುವುದು ಒಂದು ದೊಡ್ಡ ಭೌಗೋಳಿಕ ಉಪಖಂಡದ, ಪರಸ್ಪರ ಹೊಂದಿ

ಕೊಳ್ಳದ ಹೊಡೆದಾಡಿಕೊಳ್ಳುವ, ಆದರೂ ಒಟ್ಟಿಗೆ ಬದುಕಲು ಯತ್ನಿಸುವ ಗುಂಪು, ಉಪ ಗುಂಪುಗಳ ಒಂದು ಸಮೂಹವೇ ಎಂಬ ಸಂದೇಹ ಬರಬೇಕೋ, ಅಂಥವರೇ ತಮ್ಮ ಹತ್ತಿರದ ಸಾಮಾಜಿಕ ಪರಿಸರದೊಂದಿಗೆ ರಾಜಿ ಮಾಡಿಕೊಂಡು, ರಾಷ್ಟ್ರೀಯ ಸಮಾಜಕ್ಕೆ, ರಾಷ್ಟ್ರೀಯ ಹಿತಕ್ಕೆ ಸಂಬಂಧಿಸಿದ ಪೊಳ್ಳು ಆದರ್ಶದ ಮಾತುಗಳನ್ನಾಡುವಾಗ ನೋವಾಗುತ್ತದೆ. ನಮ್ಮ ರಾಜಕೀಯ ಧುರೀಣರು ಇಂಥ ಆದರ್ಶ, ಉಪದೇಶಗಳಲ್ಲಿ ನಿಷ್ಣಾತರು. ಆದರೆ ಅವರ ಸ್ವಾರ್ಥ ಅರ್ಥವಾಗುತ್ತದೆ. ಅವರು ಎಂಥ ಪರಿಸ್ಥಿತಿಯೊಂದಿಗೂ ರಾಜಿ ಮಾಡಿಕೊಳ್ಳುತ್ತಾರೆ. ಅವರಿಗೆ ಅವರ ರಾಜಕೀಯ ಬದುಕು ಮುಖ್ಯ. ಅದು ಅಲ್ಪಾವಧಿಯದಿರಬಹುದೆಂಬ ಭೀತಿಯ ಹಿನ್ನೆಲೆಯಲ್ಲಿ ಅವರು ಅಂಥ ಬದುಕಿನ ಭದ್ರತೆಗಾಗಿ, ಅದನ್ನು ಮುಂದುವರಿಸಲು ಏನನ್ನೂ ಮಾಡಲು ಸಿದ್ಧರೆಂಬುದನ್ನು ನಮ್ಮ ಸ್ವತಂತ್ರ ಭಾರತದ ಇತಿಹಾಸ ಸಾಕಷ್ಟು ಸ್ಪಷ್ಟವಾಗಿ ತಿಳಿಸಿದೆಯಾದರೂ ನಾವು ಈ ಇತಿಹಾಸದ ಪಾಠಗಳಿಂದ ಏನನ್ನೂ ಕಲಿಯುವುದಿಲ್ಲ. ಈ ರಾಜಕೀಯ ಬದುಕಿಗೆ ಬಲ, ಎಡ, ಮಧ್ಯಗಳೆಂಬ ವರ್ಗೀಕರಣ ಅಗತ್ಯವಿಲ್ಲ. ಅದು ನಮ್ಮ ಸಾಮಾಜಿಕ ಪರಿಸ್ಥಿತಿಯಲ್ಲೆ ಹುಟ್ಟಿಕೊಂಡದ್ದು. ಎಲ್ಲಕ್ಕೂ ಒಂದು ತಾತ್ವಿಕ ಆದರ್ಶ ಮುಖವಾಡವಾಗುತ್ತದೆ, ಅಷ್ಟೆ. ಆದರೆ ಎಲ್ಲಕ್ಕೂ ಮುಖ್ಯ ಉದ್ದೇಶ, ತಮ್ಮ ಹಾಗೂ ತಾವು ಕಟ್ಟಿಕೊಂಡಿರುವ ಗುಂಪಿನ ಹಿತ, ಸ್ವಾರ್ಥ, ಅಷ್ಟೆ. ಅದಕ್ಕಿಂತ ಮುಂದೆ ಹೋಗುವುದು ಅವರು ಘೋಷಣೆಗಳಲ್ಲಿ, ಪೊಳ್ಳು ಆದರ್ಶದ ಪ್ರಕಟನೆ :–

ಸ್ವಾತಂತ್ರ್ಯ ಬಂದಂದಿನಿಂದ, ಬುದ್ಧಿಜೀವಿಗಳ ಮೌಲ್ಯ ಪ್ರಜ್ಞೆಯನ್ನು ಕೆಣಕಬಹುದಾಗಿದ್ದ ಹಲವಾರು ಸನ್ನಿವೇಶಗಳನ್ನೂ ಸಂದರ್ಭಗಳನ್ನೂ ನಾವು ಇದಿರಿಸಿದ್ದೇವೆ —ನಿಷ್ಕ್ರಿಯರಾಗಿ ಬಂಗಾಲದ ಒಂದು ಸಾಮಾಜಿಕ ಪರಿಸ್ಥಿತಿಯ ಭಾವನಾತ್ಮಕ ಪದರುಗಳಲ್ಲಿಯೇ ಮೌಲ್ಯಗಳನ್ನು ಅರಸಿದ್ದ ಶರತ್‌ಚಂದ್ರರಂಥ ಲೇಖಕರು ಭಾರತದಾದ್ಯಂತ ತಮ್ಮ ಸಾಹಿತ್ಯ ಕೃತಿಗಳ ವರ್ಚಸ್ಸನ್ನು ಕೆಡವಲು ಸಮರ್ಥರಾಗಿದ್ದರೆ, ನಾಡಿನ ವಿಭಜನೆಯ ದುರಂತ ಇಂಥದೊಂದು ಸಂದರ್ಭವನ್ನು ಉತ್ತರಾಪಥದ ಲೇಖಕ ಬುದ್ಧಿಜೀವಿಗಳಿಗೆ ಒದಗಿಸಿಕೊಡಲು ಅಸಮರ್ಥವಾದುದೇಕೆ ? ಈ ಇಂಥ ದುರಂತಕ್ಕೆ ಸ್ಪಂದಿಸಬಹುದಾಗಿದ್ದ ಪ್ರತಿಭೆಯ ಕೊರತೆಯಿಂದಾಗಿಯೆ ? ಸಾಹಿತ್ಯ ಕೃತಿಗಳಿಂದ ಸಾಮಾಜಿಕ ಪರಿವರ್ತನೆ ಸಾಧ್ಯವೇ ಎಂಬ ಚರ್ಚೆ ಇಲ್ಲಿ ಅಪ್ರಸ್ತುತ. ಇಲ್ಲಿ ಹೇಳಬೇಕಾದದ್ದು ಇಂಥ ದೊಡ್ಡ ದುರಂತವೂ ಪ್ರಾದೇಶಿಕವಾಗಿಯೇ ಉಳಿದುಹೋಯಿತೆಂದು. ಅದು ಇತಿಹಾಸವಾಗಿ ಮರೆಯಾಯಿತು. ಆ ದುರಂತಕ್ಕೆ ಕಾರಣವಾದಂಥ ಸಾಮಾಜಿಕ ಪರಿಸ್ಥಿತಿಯೆ ಮುಂದುವರಿಯುತ್ತಿರುವಾಗಲೂ ನಮ್ಮ ಬುದ್ಧಿಜೀವಿಗಳೆನಿಸುವವರು ಎಚ್ಚರಾಗುವುದಿಲ್ಲ. ಜಮಶೇದ್‌ಪುರ್, ಆಲಿಗಢ, ಮೊರಾದಾಬಾದ್‌ಗಳು ಬರುತ್ತವೆ, ಹೋಗುತ್ತವೆ. ಅಷ್ಟೆ....ಯಾಕೆ ! ಅವರು ತಮ್ಮ ಸುತ್ತಲಿನ ಪರಿಸರದೊಂದಿಗೆ ರಾಜಿ ಮಾಡಿಕೊಂಡು ಅದಕ್ಕೇ ಅಂಟಿಕೊಳ್ಳುವವರು. ಅವರಿಗೆ ಪ್ರತಿಭೆ

ಕೊಡುವ ಅವಕಾಶ, ಆಹಂಕಾರಗಳು ಮುಖ್ಯ. ಪ್ರತಿಭೆಯಲ್ಲ. ವಿಶಿಷ್ಟ ಪ್ರತಿಭೆಯನ್ನು ಮೆರೆಸುವ ಯೋಗ್ಯತೆಯ, ತೀಕ್ಷ್ಣ ಸಮಾಜ ಪ್ರಜ್ಞೆಯ ಬುದ್ಧಿಜೀವಿಗಳಿಗೆ ಪ್ರಾದೇಶಿಕತೆ ಸೋಂಕುವುದಿಲ್ಲ. ಭಾಷೆ ಬಂಧನವಾಗುವುದಿಲ್ಲ. ಅವರು ಸುತ್ತಲಿನ ಪರಿಸರದೊಂದಿಗೆ ರಾಜಿ ಮಾಡಿಕೊಳ್ಳುವುದಿಲ್ಲ. ಅವರು ಗೌರವ ಕೊಡುವುದು ತಮ್ಮ ವೈಚಾರಿಕ ಚಿಂತನೆಯಲ್ಲಿ ರೂಪುಗೊಳ್ಳುವ ಮೌಲ್ಯಗಳಿಗೆ ಮಾತ್ರ.

ಮೇಲಿನ ಮಾತುಗಳನ್ನು ಬರೆಯಲು ಮುಖ್ಯ ಕಾರಣ, ನಮ್ಮ ಬುದ್ಧಿಜೀವಿಗಳೆನಿಸಿಕೊಳ್ಳುವವರ ಪ್ರತಿಭೆಯನ್ನು ಪೋಷಿಸುವ ಸಂವೇದನೆ ತನ್ನ ವೈಚಾರಿಕ ನೆಲೆಗಟ್ಟಿನಲ್ಲಿ ಪ್ರಾಮಾಣಿಕವಾದುದೆನಿಸುವ ಮೌಲ್ಯಗಳನ್ನು ರೂಪಿಸಿಕೊಳ್ಳಲು ತಡವರಿಸುತ್ತಿದೆಯೆಂಬ ಸಂದೇಹ. ಇದು ಸೃಜನಶೀಲ ಲೇಖಕರಿಗಷ್ಟೆ ಸಂಬಂಧಿಸಿದ್ದಲ್ಲ. ಎಲ್ಲ ಚಿಂತನಶೀಲರೂ ನಾವು ಬದುಕುವ ರೀತಿಯಲ್ಲಿ ನಾವು ನೆಚ್ಚಿಕೊಳ್ಳುವ ಮೌಲ್ಯಗಳಲ್ಲಿ ನಮ್ಮ ರಾಷ್ಟ್ರದ ಇತಿಹಾಸ ರೂಪುಗೊಳ್ಳುವುದೆಂಬುದನ್ನು ಮರೆಯುತ್ತಾರೆ. ಭಾಗಪತ್, ಬಾಗಲ್ಪುರಗಳು ಬರೀ ಪೋಲೀಸು ದೌರ್ಜನ್ಯವೆನಿಸುವುದೂ, ಆಲಿಗಢ ಮೊರಾದಾಬಾದ್‌ಗಳು ಜಾತೀಯ ಸಮಸ್ಯೆಗಳಾಗುವುದೂ ಅಸ್ಸಾಮಿನ ಆಂದೋಲನಕ್ಕೆ ಬರೀ ಪ್ರಾದೇಶಿಕ ಸ್ವರೂಪ ಬರುವುದೂ, ನಕ್ಸಲೀಯ ಚಟುವಟಿಕೆಗಳು ಬರೀ ವಿಧ್ವಂಸಕ ಚಟುವಟಿಕೆಗಳೆನಿಸುವುದೂ ಇಂಥ ದೃಷ್ಟಿಕೋನದಿಂದ. ನಾವು ಒಂದು ಹೊಸ ಸಮಾಜವನ್ನು ರೂಪಿಸುವ ಮಾತಂತಿರಲಿ, ಭಾರತದ ಸಮಗ್ರತೆಯ ಕಲ್ಪನೆಯನ್ನು ತಂದುಕೊಂಡು ಒಂದು ಸಮನ್ವಯದ ಪ್ರಯತ್ನವಾದರೂ ಸಾಧ್ಯವೇ ಎಂದು ಕೂಡ ಯೋಚಿಸುವುದಿಲ್ಲ. ಹತ್ತಿರದ ಮಹಾರಾಷ್ಟ್ರ-ಕರ್ನಾಟಕ ಗಡಿ ತಂಟೆಯನ್ನೇ ಉದಾಹರಣೆಗಾಗಿ ತೆಗೆದುಕೊಳ್ಳೋಣ. ಇಲ್ಲಿ ನಮ್ಮ ಮೌಲ್ಯ ಪ್ರಜ್ಞೆ ಸರಿಯಾದುದೇ ಎಂದು ನಾವು ವಿವೇಚಿಸುವುದು ಬೇಡವೇ ಎಂದು ಕರ್ನಾಟಕ ಮಹಾರಾಷ್ಟ್ರಗಳ ಬುದ್ಧಿಜೀವಿಗಳೆನಿಸುವವರು ಚಿಂತಿಸುವುದೇ ಇಲ್ಲ. ಇಲ್ಲಿ ಅವರಿಗೆಲ್ಲ ಭಾಷೆಯ ಭಾವನಾತ್ಮಕ ಸಂಬಂಧ ಮುಖ್ಯವಾಗುತ್ತದೆ. ಅದು ಜೀವನ-ಮರಣದ ಪ್ರಶ್ನೆಯಾಗುತ್ತದೆ. ತಮ್ಮ ಮಕ್ಕಳ ಶಿಕ್ಷಣದ ಪ್ರಶ್ನೆ ಬಂದಾಗ 'ಉತ್ತಮಿಕೆ'ಯನ್ನರಸುವಾಗ ಯಾವ ಭಾಷೆಯಾದರೂ ಚಿಂತಿಲ್ಲವೆನ್ನುವ ಬುದ್ಧಿಜೀವಿಗಳೂ ಗಡಿಯ ಪ್ರಶ್ನೆ ಬಂದಾಗ ಪ್ರಾದೇಶಿಕ ಭಾವನೆಗಳೊಂದಿಗೆ ರಾಜಿ ಮಾಡಿಕೊಳ್ಳುತ್ತಾರೆ. ಲೇಖಕರಿಗೆ, ಸಾಹಿತ್ಯಕ್ಕೆ ಸಂಬಂಧಿಸಿದ ಸಂಸ್ಥೆಗಳಂತೂ ಭಾಷೆಯನ್ನು ಉಳಿಸುವ, ಬೆಳೆಸುವ ಹೊಣೆಗಾರಿಕೆ ತಮ್ಮದೇ ಎಂಬಂತೆ ಠರಾವುಗಳನ್ನು ಅಂಗೀಕರಿಸಿ ಸರಕಾರಕ್ಕೆ ಕಳುಹಿಸಿಕೊಡುತ್ತವೆ. ಹಿಂದೀ ಖಂಡದ ಲೇಖಕರಿಗೆ ವಿಂಧ್ಯದ ಕೆಳಗೆ ಸಾಹಿತ್ಯ ಕ್ಷೇತ್ರದಲ್ಲಿ ಏನಾಗುತ್ತಿದೆಯೆಂದು ತಿಳಿಯುವ ಕುತೂಹಲವೂ ಅಷ್ಟಕ್ಕಷ್ಟೆ....ಆದರೆ ಹಿಂದಿಯ ಸಾಂಸ್ಕೃತಿಕ ನಿಯೋಗವೊಂದು ವಿದೇಶ ಸಂಚಾರಕ್ಕೆ ಸಿದ್ಧವಾಗಲಿದೆ ಯೆಂದಾದರೆ ಅವರಿಗೆ ಎಲ್ಲಿಲ್ಲದ ಆಸಕ್ತಿ. ತಮ್ಮ ಪರಿಸರದಲ್ಲೇ ನಡೆಯುವ ಸಾಮಾಜಿಕ ವಿಪ್ಲವಗಳೇ ಅವರನ್ನು ತಟ್ಟದಿರುವಾಗ ಬೇರೆ ಭಾಗಗಳ

ಮಾತೇಕೆ ! ಬಹು ಸಂಖ್ಯಾಕರ ಭಾಷೆಯಾದ ಹಿಂದೀಯಲ್ಲಿ ತಮ್ಮ ಸ್ವಾರ್ಥವಿದೆ ಯೆಂಬ ಭಾಸವಾಗುವಂತೆ ಅವರ ನಡೆವಳಿಕೆಯಿರುವಾಗ, ಬುದ್ಧಿಜೀವಿಗಳಿಗೆಲ್ಲ ಒಂದೇ ಜಾತಿ, ಒಂದೇ ಭಾಷೆಯೆಂದು ಹೇಳುವುದು ದಾರ್ಷ್ಟ್ಯದ ಮಾತಾಗಬಹುದು. ಇನ್ನು ಇಂಗ್ಲೀಷಿನ ಸಂಪರ್ಕ ಬೆಳೆಸಿಕೊಂಡ ಲೇಖಕರು, ಬುದ್ಧಿಜೀವಿಗಳಿಗೆಲ್ಲ ಬೇರೆಯೇ ದಾರಿ....ಅವರ ವರ್ಗೋತ್ತಮ (elitist) ಪ್ರಜ್ಞೆ ದೇವರಿಗೇ ಪ್ರೀತಿ.

೧೯೮೦ರ ಜ್ಞಾನಪೀಠ ಪ್ರಶಸ್ತಿಯನ್ನು ಅಸ್ಸಾಮೀ ಲೇಖಕ ಡಾ|| ವಿರೇಂದ್ರ ಕುಮಾರ ಭಟ್ಟಾಚಾರ್ಯರಿಗೆ ಕೊಡಲಾಯಿತು, ನಮ್ಮ ಪ್ರಧಾನಮಂತ್ರಿಗಳ ಹಸ್ತ ದಿಂದ. ಈ ಸಮಾರಂಭದ ಪತ್ರಿಕಾವರದಿ ನಿಜವಾದರೆ, ಪ್ರಧಾನ ಮಂತ್ರಿಗಳು ಅಲ್ಲಿ ನೆರೆದಿದ್ದ ಲೇಖಕ ಸ್ತೋಮವನ್ನುದ್ದೇಶಿಸಿ ಮಾಡಿದ್ದ ಉಪದೇಶ ಅತ್ಯಂತ ಸ್ವಾರಸ್ಯಕರವಾಗಿದ್ದಿತ್ತು. "ಲೇಖಕರ ಸ್ವಾತಂತ್ರ್ಯವನ್ನು ಎಲ್ಲರೂ ಗೌರವಿಸಬೇಕಾದದ್ದು ಅಗತ್ಯ....ಆದರೆ ಲೇಖಕರೂ ತಮ್ಮ ಕರ್ತವ್ಯವನ್ನರಿತು ಮತೀಯ ಸಂಘರ್ಷಕ್ಕೆ ಅವಕಾಶ ಮಾಡಿ ಕೊಡುವ (!) ಸಾಹಿತ್ಯ ನಿರ್ಮಾಣಮಾಡಬಾರದು" ಎಂಬುದು ಅವರ ಮಾತಿನ ಸಾರ. ಸೃಜನಶೀಲ ಲೇಖಕರೂ, ವಿದ್ವನ್ಮಣಿಗಳೂ, ಬುದ್ಧಿಜೀವಿ ಗಳೂ (!) ಸೇರಿದ್ದ ಸಭೆಯಲ್ಲಿ ಇಂಥ ಉಪದೇಶಮಾಡಲು ಧೈರ್ಯ ಸಾಕಷ್ಟಿರಬೇಕು. ಅಂಥ ಧೈರ್ಯವನ್ನು ನಮ್ಮ ಪ್ರಧಾನ ಮಂತ್ರಿಗಳಿಗೆ ಒದಗಿಸಿಕೊಟ್ಟದ್ದು ನಮ್ಮ ಬುದ್ಧಿಜೀವಿಗಳೆನಿಸಿಕೊಳ್ಳುವವರೇ. ಹಾಗಿಲ್ಲವಾದರೆ, ಒಂದು ಮಹತ್ವದ ಸೃಜನ ಶೀಲ ಕೃತಿಯ ಯೋಗ್ಯತೆಯನ್ನು ಗೌರವಿಸುವ ಇಂಥ ಸಭೆಯಲ್ಲಿ, ಪೀತ ಪತ್ರಿಕೆ ಗಳಿಗೆ ಮಾಡಬಹುದಾಗಿದ್ದ ಉಪದೇಶವನ್ನು ಪ್ರಧಾನ ಮಂತ್ರಿಗಳು ಮಾಡಿದಾಗ, ಎಲ್ಲ ಬಾಯಿಮುಚ್ಚಿಕೊಂಡು ಕುಳಿತು ಅಧಿಕಾರಕ್ಕೆ ಗೌರವ ಕೊಡುವವರೆ. ಇದಕ್ಕೇ ಹೇಳುವುದು ಇಲ್ಲಿ ಗೌರವ ತಿರುವುಮುರುವಾಗಿದೆ, ಎಂದು. ಅಷ್ಟೆಯೇ ! ಅಂದು ಜ್ಞಾನಪೀಠ ಪ್ರಶಸ್ತಿ ಪಡೆದ ಲೇಖಕರು ಒಂದು ವರ್ಷ ಕಾಲ ಅಂಧೋಲನದಲ್ಲಿ ಸಂಕಟಪಡುತ್ತಿರುವ ಗಡಿನಾಡಾದ ಅಸ್ಸಾಮಿನವರು. ಪ್ರಶಸ್ತಿ ಪಡೆದು ಕೆಲವು ದಿನ ಕಳೆದ ಮೇಲೆ ಅವರು ದೆಹಲಿಯ ಒಂದು ವಾರ್ತಾಸಂಸ್ಥೆಗೆ ಅಸ್ಸಾಮಿನ ಆಂದೋಲನದ ವಿಚಾರ ತಮ್ಮ ಸ್ಪಷ್ಟ ಅಭಿಪ್ರಾಯ ತಿಳಿಸಲು ಮುಂದಾದರು. ಪ್ರಧಾನ ಮಂತ್ರಿ ಗಳೇ ಉಪಸ್ಥಿತರಿದ್ದ ಜ್ಞಾನಪೀಠ ಪ್ರಶಸ್ತಿ ಪ್ರಧಾನ ಸಭೆಯಲ್ಲಿ ಅವರು ಮಾತನಾಡಿ ದಾಗ, ಅಸ್ಸಾಮಿನ ಸಂಕಟ ಅವರ ಮಾತುಗಳಲ್ಲಿ ವ್ಯಕ್ತವಾಗಿತ್ತೇ ಏನೆಂಬುದನ್ನು ಪತ್ರಿಕೆಗಳು ವಿವರವಾಗಿ ವರದಿ ಮಾಡಿಲ್ಲ.

ಸರಕಾರದ ಕೃಪೆಯೇ ಗೌರವದ ಚಿಹ್ನೆ ಎಂಬ ಭಾವನೆ ಭಟ್ಟಂಗಿಗಳಲ್ಲಿರಬ ಹುದು. ಆದರೆ ನಮ್ಮ ಬುದ್ಧಿಜೀವಿಗಳಿಗೆ ಅದು ಅಂಟಿಕೊಂಡಿರುವಷ್ಟು ಕಾಲ ಅಂಥ ವರ ಚಿಂತನಶೀಲತೆ ಅಪ್ರಾಮಾಣಿಕವಾದುದಾಗುತ್ತದೆ. ನಮ್ಮ ಲೇಖಕರಷ್ಟೇ ಅಲ್ಲ, ನಮ್ಮ ಅರ್ಥಶಾಸ್ತ್ರಜ್ಞರಾಗಲೀ, ಇತಿಹಾಸಜ್ಞರಾಗಲೀ, ವಿಜ್ಞಾನಿಗಳಾಗಲೀ ತಮ್ಮ ಸಭೆ–ಸಂಘಟನೆಗಳೆಲ್ಲ ಅಧಿಕಾರದಲ್ಲಿರುವ ರಾಜಕಾರಣಿಗಳ ಕೃಪಾಶ್ರಯದಲ್ಲೇ ನಡೆಯ

ಬೇಕೆಂದು 'ಸ್ವತಂತ್ರ' ಭಾರತದಲ್ಲೂ ಏಕೆ ಬಯಸುತ್ತಾರೋ ಅರ್ಥವಾಗುವುದಿಲ್ಲ. ಇಂಥ ಆವರಣದಲ್ಲಿ ಎಲ್ಲ ವಿಚಾರಗಳೂ 'ಆಡಳಿತೆ'ಯ ಅರ್ಥಾತ್ ವ್ಯವಸ್ಥೆಯ ಅಧೀನವಾಗಿರಬೇಕಾದ ಸಂಭವವೇ ಹೆಚ್ಚು. ಇಂತಲ್ಲೆಲ್ಲ ಪ್ರತಿಭೆ ಅರಸುವುದು ಪ್ರತಿಷ್ಠೆಯನ್ನು, ಮೌಲ್ಯಗಳನ್ನಲ್ಲ. ಎರಡು ಸಾಹಿತ್ಯ ಕೃತಿಗಳನ್ನು ಅಯೋಗ್ಯವೆಂದು ತೀರ್ಮಾನಿಸಿದ ಮಹಾರಾಷ್ಟ್ರದಲ್ಲಿ ಈಗ ಪ್ರಧಾನ ಮಂತ್ರಿಯವರ ಹೆಸರಿನಲ್ಲಿ 'ಪ್ರತಿಭಾ ಪ್ರತಿಷ್ಠಾನ'. ಆದರೆ ಈ ಪ್ರತಿಷ್ಠಾನವನ್ನು ಕೊಂಡಾಡುವ ಬುದ್ಧಿ ಜೀವಿಗಳಿಗೂ ನಮ್ಮಲ್ಲಿ ಕೊರತೆಯಿಲ್ಲ.

---

"ಜಗತ್ತಿನಲ್ಲಿ ಆರಂಭದ ಸಾಮಾಜಿಕ ವ್ಯವಸ್ಥೆಗಳ ಕಾಲದಿಂದಲೂ ರಾಜಕೀಯ ತನ್ನ ಹಿರಿಮೆಯನ್ನು ಮೆರೆದಿದೆ. ಜನಸಮುದಾಯದ ಆಗು ಹೋಗುಗಳನ್ನು ನಿರ್ದೇಶಿಸುವ, ನಿಯಂತ್ರಿಸುವ, ಸಾಮರ್ಥ್ಯ ಅದರದು. ಬದುಕಿಗೆ-ಸಮಾಜಕ್ಕೆ-ನೂರು ಎಳೆಗಳಿಂದ ಬರಹಗಾರ ಬಂಧಿತನಾಗಬೇಕು ಎನ್ನುವಾಗ, ರಾಜಕೀಯದಿಂದ ಆತ ದೂರವಿರುವುದು ಹೇಗೆ ಸಾಧ್ಯ? ಗ್ರೀಕ್ ಮಹಾ ಕಾವ್ಯಗಳ ಕರ್ತೃವಾಗಲೀ, ಭಾರತೀಯ ಮಹಾಕಾವ್ಯಗಳನ್ನು ರಚಿಸಿದವನಾಗಲೀ ರಾಜಕೀಯವನ್ನು ಬಿಟ್ಟಿರಲಿಲ್ಲ. ರಾಷ್ಟ್ರದ ಕಲ್ಪನೆಯನ್ನು ಬಲಗೊಳಿಸಿ, ರಾಷ್ಟ್ರೀಯ ಏಕತೆಯನ್ನು ಪರೋಕ್ಷವಾಗಿ ಸಾಧಿಸಲು ಆ ಕಾವ್ಯಗಳು ಬಹುಮಟ್ಟಿಗೆ ಕಾರಣವಾದವು.

ಎಲ್ಲ ದೇಶಗಳ ಎಲ್ಲ ಕಾಲಗಳ ಪ್ರತಿಭಾನ್ವಿತ ಬರೆಹಗಾರರೂ ಕಲಾವಿದರೂ ಒಂದಲ್ಲ ಒಂದು ರೀತಿಯಲ್ಲಿ ರಾಜಕೀಯ ಸೇಚನಕ್ಕೆ ಗುರಿಯಾದವರೇ. ಪನ್ನೀರು, ರಾಡಿ ಎರಡರ ಬಳಕೆಯೂ ಉಂಟು ಈ ಸೇಚನದಲ್ಲಿ. ರಾಜಕೀಯದ ಪ್ರಭೃತಿಗಳೊಡನೆ ಒಮ್ಮೊಮ್ಮೆ ಘರ್ಷಣೆಯೂ ಇಲ್ಲದಿಲ್ಲ."

**—ನಿರಂಜನ**

# ಆವಾಸ ವಿಜ್ಞಾನದ ಮೂಲತತ್ವಗಳು

ಮಾಧವ ಗಾಡ್ಗಿಲ್

ಪ್ರಕೃತಿಯ ಮೇಲೆ ನಿರಂತರವಾಗಿ ಆಘಾತವೆಸಗುವುದರಿಂದ ಆಗುವ ದುಷ್ಪರಿಣಾಮಗಳ ಅರಿವು, ಕಳೆದ ದಶಕದಲ್ಲಿ ವಿಶ್ವದಾದ್ಯಂತ ಹೆಚ್ಚು ಹೆಚ್ಚಾಗಿ ಮೂಡುತ್ತಿರುವುದನ್ನು ನಾವು ಕಾಣಬಹುದು. ಈ ಅರಿವು ಹಿಂದೆಯೂ ಅನೇಕ ಬಾರಿ ಮೂಡಿದ್ದುದನ್ನು ನಾವು ಇತಿಹಾಸದುದ್ದಕ್ಕೂ ಗುರುತಿಸಬಹುದು. ಅನೇಕ ಪ್ರಾಚೀನ ನಾಗರೀಕತೆಗಳು ಈ ತತ್ವವನ್ನು ಒಪ್ಪಿಕೊಂಡು ಅದನ್ನು ಪಾಲಿಸಿಕೊಂಡು ಬರುತ್ತಿದ್ದವು. ನಮ್ಮ ಅನೇಕ ಸಾಂಪ್ರದಾಯಿಕ ಬೆಳಗಿನ ಪ್ರಾರ್ಥನೆಗಳು ಭೂತಾಯಿಯನ್ನು, ಆಕೆಯ ಮೇಲೆ ಅಡಿಯಿರಿಸಿದ್ದಕ್ಕಾಗಿ ಕ್ಷಮಿಸುವಂತೆ ಬೇಡಿಕೊಳ್ಳುವ ಶ್ಲೋಕಗಳೊಂದಿಗೆ ಪ್ರಾರಂಭವಾಗುತ್ತವೆ.

ಸಮುದ್ರವಸನೆ ಪೃಥ್ವಿ ಪರ್ವತಸ್ತನ ಮಂಡಲೆ ।
ವಿಷ್ಣು ಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮೆ ಸ್ವಮೆ ॥

ನಮ್ಮ ಪ್ರಾಚೀನರ ಅರಿವು ಧಾರ್ಮಿಕ ಶಬ್ದಗಳಲ್ಲಿ ವ್ಯಕ್ತವಾಗಿದ್ದರೆ, ಸಮಕಾಲೀನ ಪ್ರಜ್ಞೆ ಆಧುನಿಕ ವಿಜ್ಞಾನದ ತಳಹದಿಯ ಮೇಲೆ ನಿಂತಿದೆ. ಮಾನವ ಮತ್ತು ಪ್ರಕೃತಿಗಳ ಪರಸ್ಪರ ಸಂಬಂಧಗಳ ತಿಳಿವು ನೀಡುವ ವಿಜ್ಞಾನದ ವಿಭಾಗವೇ 'ಆವಾಸ ವಿಜ್ಞಾನ' (Science of Ecology). ಇದರ ಮೂಲತತ್ವಗಳು ಈಚಿನ ದಿನಗಳಲ್ಲಿ ಕಾಣಬರುತ್ತಿರುವ ಪರಿಸರ ಮಾಲಿನ್ಯದ ಬಗೆಗೆ ಗಂಭೀರವಾಗಿ ಆಲೋಚಿಸಲು ನೆರವು ನೀಡುತ್ತವೆ.

ಆವಾಸ ವಿಜ್ಞಾನದ ಆರು ಮೂಲತತ್ವಗಳನ್ನು ಪ್ರತಿಪಾದಿಸಿ,ಅವುಗಳನ್ನಾಧರಿಸಿ, ಮಾನವ ಸಮಾಜ ಇಂದು ಎದುರಿಸುತ್ತಿರುವ ಪರಿಸರ ಮಾಲಿನ್ಯದ ಸಮಸ್ಯೆಗಳನ್ನು ಚರ್ಚಿಸ ಬಯಸುತ್ತೇನೆ. ಈ ತತ್ವಗಳನ್ನು ಅನುಕ್ರಮವಾಗಿ (೧) ಪರಾಸ್ಪರಾವಲಂಬನೆ (೨) ಆವಾಸ ಸಮತೋಲನ (೩) ಜೀವಿಗಳ ಏಕತೆ (೪) ಜೈವಿಕ ಚೈತನ (೫) ವೈವಿಧ್ಯತೆಯ ಮಹತ್ವ ಮತ್ತು (೬) ನಿರಂತರ ಫಲ ಎಂದು ಕರೆಯೋಣ.

ಮೊದಲಿಗೆ ಪರಾಸ್ಪರಾವಲಂಬನೆಯ ತತ್ವವನ್ನು ಪರಾಮರ್ಶಿಸೋಣ. ಮೂಲಭೂತವಾಗಿ ಪ್ರಕೃತಿಯಲ್ಲಿನ ಎಲ್ಲ ವಸ್ತುಗಳೂ ಉಳಿದೆಲ್ಲ ವಸ್ತುಗಳ ಮೇಲೆ ಪ್ರಭಾವ ಬೀರುತ್ತವೆ. ಇಂಗ್ಲೆಂಡಿನ ಒಂದು ಗ್ರಾಮದಲ್ಲಿನ ಅವಿವಾಹಿತ ಕನ್ಯೆಯರ ಸಂಖ್ಯೆಗೂ ಅಲ್ಲಿ ಮೇವಿಗಾಗಿ ಬೆಳೆಯುತ್ತಿದ್ದ ಬೆಳೆಗೂ ಇರುವ ಪರಸ್ಪರ ಸಂಬಂಧದ ಬಗೆಗಿನ

ಡಾರ್ವಿನ್ನನ ಪ್ರಸಿದ್ಧ ಹೇಳಿಕೆ ಹೀಗಿದೆ: ಅವಿವಾಹಿತೆಯರ ಸಂಖ್ಯೆ ಹೆಚ್ಚಿದಂತೆಲ್ಲ ಬೆಕ್ಕುಗಳ ಸಂಖ್ಯೆಯೂ ಬೆಳೆಯುತ್ತದೆ. ಇದರಿಂದಾಗಿ ಇಲಿಗಳ ಸಂಖ್ಯೆ ಕಡಿಮೆ. ಇಲಿಗಳ ಸಂಖ್ಯೆ ಕಡಿಮೆಯಾದಂತೆ ಜೇನುನೊಣಗಳ ಸಂಖ್ಯೆ ಹೆಚ್ಚಾಗುತ್ತದೆ. ಜೇನು ನೊಣಗಳು ಹೆಚ್ಚಾದಂತೆ ಪರಾಗಸ್ಪರ್ಶ ಹೆಚ್ಚಾಗಿ ಬೆಳೆಯೂ ಹೆಚ್ಚುತ್ತದೆ. ಗಂಭೀರ ವಾಗಿ ಯೋಚಿಸಿದರೆ ಈ ರೀತಿಯ ಪರಸ್ಪರ ಪರಿಣಾಮ ಎಷ್ಟು ವಾಸ್ತವ ಎನ್ನುವುದು ತಿಳಿಯುತ್ತದೆ. ಕರ್ನಾಟಕದಲ್ಲಿ ಮಲೆನಾಡಿನುದ್ದಕ್ಕೂ ಕಾಡುಗಳು ಹಿಂದೆ ಸರಿಯು ತ್ತಿವೆ. ಇನ್ನೂ ಬದುಕಿ ಉಳಿದಿರುವಕಡೆ ದಟ್ಟ ಹರಿದ್ವರ್ಣ ಕಾಡುಗಳು ಮಾಯ ವಾಗಿ, ಬೇಸಿಗೆಯಲ್ಲಿ ಎಲೆಗಳೆಲ್ಲ ಉದುರಿಹೋದ ಅತಿ ವಿರಳವಾದ ಸಸ್ಯಸಂಪತ್ತು ಕಾಣ ಬರುತ್ತಿದೆ. ಸಸ್ಯ ಜೀವನದಲ್ಲಿನ ಈ ಬದಲಾವಣೆ ವನ್ಯ ಮೃಗಗಳ ಜೀವನ ವಿಧಾನ ದಲ್ಲಿ ಬದಲಾವಣೆಯನ್ನುಂಟುಮಾಡುತ್ತದೆ. ಕಾಡುಗಳಲ್ಲಿ ವಿಶೇಷವಾಗಿ ಕೆಲವು ಜಾತಿಯ ಉಣ್ಣೆ ಹುಳುಗಳ ಸಂಖ್ಯೆ ಹೆಚ್ಚಾಗುತ್ತಿದೆ. ಇಂತಹ ಒಂದು ಜಾತಿಯ ಉಣ್ಣೆ ಹುಳುಗಳು ಕ್ಯಾಸನೂರು ಅರಣ್ಯದಲ್ಲಿ ಕಂಡುಬಂದಿರುವ ಒಂದು ಬಗೆಯ ರೋಗಕ್ಕೆ ಕಾರಣವಾದ ಕ್ರಿಮಿಗಳನ್ನು ಹರಡುವಲ್ಲಿ ಪ್ರಧಾನ ಪಾತ್ರವಹಿಸಿವೆ. ಅಂದರೆ ಉಣ್ಣೆ ಹುಳುಗಳ ಹೆಚ್ಚಳಕ್ಕೂ ಕ್ಯಾಸನೂರು ಕಾಡಿನ ವನ್ಯಮೃಗಗಳಲ್ಲಿಯೂ, ಹನುಮಾನ್ ತಳಿಯ ಕೋತಿಗಳಲ್ಲಿಯೂ ಮತ್ತು ಸುತ್ತಮುತ್ತಲಿನ ಜನಗಳಲ್ಲಿಯೂ ವ್ಯಾಪಕವಾಗಿ ಕಾಣಿಸುತ್ತಿರುವ ಜಾಡ್ಯಕ್ಕೂ ಪರಸ್ಪರ ಸಂಬಂಧವಿರುವುದು ಗಮನಾರ್ಹ. 1950ರಲ್ಲಿ ಹಠಾತ್ತನೆ ತಲೆದೋರಿದ ಈ ಜಾಡ್ಯ ಮತ್ತು ಕರ್ಣಾಟಕದ ಸಾಗರ ತಾಲ್ಲೋಕಿನ ಕಾಡುಗಳಲ್ಲಿ ಈಗಲೂ ಕಾಣಬರುತ್ತಿರುವ ಜಾಡ್ಯಗಳ ಮೂಲ– ಸಹ್ಯಾದ್ರಿಯ ಕಾಡುಗಳು ವಿರಳವಾಗುತ್ತಿರುವುದರಲ್ಲಿದೆ.

ಇನ್ನು ಎರಡನೆಯ ತತ್ವ ; ಪರಸ್ಪರ ಸಮತೋಲನ. ಪ್ರಕೃತಿಯಲ್ಲಿನ ಆವಾಸ ವ್ಯವಸ್ಥೆ–ಚೈತನ್ಯ ಮತ್ತು ವಸ್ತುಗಳು ಪ್ರವಹಿಸುವ ತಡೆರಹಿತ ವ್ಯವಸ್ಥೆ. ಉದಾ ಹರಣೆಗೆ ಗೊತ್ತಾದ ಒಂದು ಪ್ರದೇಶದ ಮೇಲೆ ಮಳೆಯಿಂದಾಗಿಯೊ, ಹೊಳೆ ನದಿ ಗಳಿಂದಲೋ ಅಥವಾ ಬಾವಿಗಳಿಂದಲೋ ನೀರು ಹರಿಯುತ್ತದೆ. ಇದರಲ್ಲಿ ಕೆಲವು ಭಾಗ ಭೂಮಿಯಲ್ಲಿ ಇಂಗಿ ಆದರಲ್ಲಿನ ಅಂತರ್ಜಲದ ಪ್ರಮಾಣವನ್ನು ಹೆಚ್ಚಿಸುತ್ತದೆ. ಇನ್ನು ಸ್ವಲ್ಪ ಭಾಗಗಳು ನೆಲದ ಮೇಲೆ ಹರಿದುಹೋಗುತ್ತದೆ. ಉಳಿದ ನೀರು ಆವಿ ಯಾಗುತ್ತದೆ. ಒಂದು ಪ್ರದೇಶದ ಮೇಲೆ ಬಿದ್ದ ನೀರಿನ ಪ್ರಮಾಣ ಅಲ್ಲಿಂದ ಹರಿದು ಹೋಗುವ ನೀರಿನ ಪ್ರಮಾಣಕ್ಕೆ ಸಮನಾಗಿದ್ದರೆ ಭೂಮಿಯ ಅಂತರ್ಜಲದ ನೀರಿನ ಸಂಗ್ರಹಣದಲ್ಲಿ ವ್ಯತ್ಯಾಸವಾಗುವುದಿಲ್ಲ. ಹಾಗಿಲ್ಲದೆ ಹರಿದುಹೋಗುವ ನೀರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ನೀರು ಇಂಗಿದರೆ ಅಂತರ್ಜಲದ ನೀರಿನ ಪ್ರಮಾಣ ಹೆಚ್ಚುತ್ತದೆ. ಬಿದ್ದ ನೀರಿಗಿಂತ ಹರಿದು ಹೋದ ನೀರು ಹೆಚ್ಚಾದಲ್ಲಿ ಅಂತರ್ಜಲದ ನೀರಿನ ಪ್ರಮಾಣ ಕಡಿಮೆಯಾಗುತ್ತದೆ. ಮೇಲಿನ ಎರಡು ವ್ಯತ್ಯಾಸಗಳಲ್ಲಿ ಯಾವುದು ತಲೆದೋರಿದರೂ ನಮಗೆ ಕಷ್ಟ ತಪ್ಪಿದ್ದಲ್ಲ. ಇಂತಹ ಒಂದು ಪರಿಣಾಮವನ್ನು ನಾವು ಮಲಪ್ರಭ,

ಘಟಪ್ರಭ ಜಲಾಶಯಗಳ ಅಚ್ಚುಕಟ್ಟು ಪ್ರದೇಶಗಳಲ್ಲಿನ ಹತ್ತಿ ಬೆಳೆಯುವ ಎರೆ ಹೊಲಗಳಲ್ಲಿ ಇಳುವರಿ ಕಡಿಮೆಯಾಗುತ್ತಿರುವುದರಲ್ಲಿ ಗಮನಿಸಬಹುದು. ಜಲಾಶಯದಿಂದ ಹರಿಯುವ ಯಥೇಚ್ಛವಾದ ನೀರು ಭೂಮಿಯೊಳಕ್ಕೆ ಹೆಚ್ಚಾಗಿ ಇಂಗದೆ, ಹರಿದು ಹೋಗಲು ಬೇಕಾದ ಅವಕಾಶ ಕಲ್ಪಿಸದಿದ್ದರಿಂದ, ಮಣ್ಣಿನ ಕೆಳಪದರಗಳಲ್ಲಿ ನೀರು ಹೆಚ್ಚಾಗಿ ನಿಂತು ಬೆಳೆ ಇಳಿಮುಖವಾಗಿದೆ.

ಇದಕ್ಕೆ ತದ್ವಿರುದ್ಧವಾದ ಅಸಮತೋಲನ ತಮಿಳುನಾಡಿನ ಕೊಯಮತ್ತೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಕಾಣಬರುತ್ತದೆ. ಅಲ್ಲಿ ವ್ಯವಸಾಯಕ್ಕೆ, ಅದರಲ್ಲೂ ಹೆಚ್ಚು ನೀರು ಬಯಸುವ ಕಬ್ಬು ಮುಂತಾದ ಬೆಳೆಗಳಿಗೆ, ಬಾವಿಗಳಿಂದ ನೀರೆತ್ತುವ ಪಂಪುಗಳ ಸಹಾಯದಿಂದ ಒಂದೇ ಸಮನೆ ನೀರನ್ನು ಹೊರಕ್ಕೆ ತರಲಾಗುತ್ತಿದೆ. ಇದರಿಂದಾಗಿ ಅಂತರ್ಜಲದ ನೀರಿನ ಸಂಗ್ರಹಣೆಯು ಪ್ರಮಾಣ ಅಲ್ಲಿಂದ ಹೊರಕ್ಕೆ ತೆಗೆಯುತ್ತಿರುವ ಪ್ರಮಾಣಕ್ಕಿಂತ ಕಡಿಮೆಯಾಗಿ ಒಂದೇ ಸಮನೆ ಅಂತರ್ಜಲ ಕುಗ್ಗುತ್ತಿದೆ. ಇದು ಹೀಗೆಯೇ ಮುಂದುವರೆದಲ್ಲಿ ಹೆಚ್ಚು ಆಳದ ಬಾವಿಗಳನ್ನು ತೋಡಿದರೂ ಸಹ, ಬೆಳೆಗಳನ್ನು ಪೋಷಿಸಲು ಸಾಕಷ್ಟು ಪ್ರಮಾಣದಲ್ಲಿ ನೀರು ಸಿಕ್ಕದೇ ಹೋಗುತ್ತದೆ. ಅನಿವಾರ್ಯವಾಗಿ ವ್ಯವಸಾಯ ಉತ್ಪನ್ನ ಕುಗ್ಗುತ್ತದೆ.

ಇನ್ನು ಮೂರನೆಯ ತತ್ವವಾದ ಜೀವಿಗಳ ಏಕತೆ–ಎಲ್ಲ ಜೀವಿಗಳೂ ಮೂಲಭೂತವಾಗಿ ಒಂದು ಮೂಲವಸ್ತುವಿನಿಂದ ನಿರ್ಮಾಣಗೊಂಡಿರುವುದಕ್ಕೆ ಸಂಬಂಧಿಸಿದೆ. ಅತ್ಯಂತ ಕ್ಷುದ್ರ ಜೀವಿಯಾದ ವೈರಸ್‌ನಿಂದ ಹಿಡಿದು ಮಾನವನವರೆಗೆ ಎಲ್ಲ ಜೀವಿಗಳ ರಚನೆಯಲ್ಲಿ ಕಾಣುವ ಪ್ರೋಟೀನ್‌ಗಳು, ಶರ್ಕರ ಪಿಷ್ಟಗಳು, ಅನುವಂಶಿಕ ಡಿ.ಎನ್.ಎ. ಗಳೂ ಒಂದೇ ಆಗಿರುತ್ತವೆ. ಹಾಗೆ ನೋಡಿದರೆ ಮೂವತ್ತು ಲಕ್ಷ ಜೀವರಾಶಿಗಳಾದ ಸೂಕ್ಷ್ಮಾಣುದೇಹಿಗಳು, ಸಸ್ಯಗಳು, ಪ್ರಾಣಿಗಳಿಂದ ಕೂಡಿದ ಅತ್ಯಂತ ವೈವಿಧ್ಯಮಯವಾದ ಎಲ್ಲ ಸೃಷ್ಟಿಯೂ ಒಂದೇ ಮೂಲವಸ್ತುವಿನಿಂದ ಸುಮಾರು ಮುನ್ನೂರೈವತ್ತು ಕೋಟಿ ವರ್ಷಗಳಲ್ಲಿ ವಿಕಸನಗೊಂಡಿರುವುದನ್ನೂ, ಈ ಕ್ರಿಯೆ ಇನ್ನೂ ಮುಂದುವರೆಯುತ್ತಿರುವುದನ್ನು ಗುರುತಿಸಬಹುದು. ಈ ರೀತಿಯ ಅಖಂಡ ಪರಂಪರೆಯಿಂದಾಗಿ ಜೀವಾಣುಗಳು ಇತರೇ ಜೀವಾಣುಗಳು ಸೃಷ್ಟಿಸಿದ ರಾಸಾಯನಿಕ ವಸ್ತುಗಳೊಂದಿಗೆ ವ್ಯವಹರಿಸಲು ಸಮರ್ಥವಾಗಿರುತ್ತವೆ. ಆದರೆ ಇವೇ ಜೀವಾಣುಗಳು ತಮಗೆ ಅಪರಿಚಿತವಾದ ಮಾನವ ನಿರ್ಮಿತ ರಾಸಾಯನಿಕ ಪದಾರ್ಥಗಳೊಂದಿಗೆ ವ್ಯವಹರಿಸಲು ಎಷ್ಟೋ ಸಂದರ್ಭಗಳಲ್ಲಿ ಅಸಮರ್ಥವಾಗುತ್ತವೆ. ಕೆಲವು ಕೃತಕ ರಾಸಾಯನಿಕ ಪದಾರ್ಥಗಳು ಜೀವಾಣುಗಳಿಗೆ ಮಾರಕವಾಗುವುದೇ ಅಲ್ಲದೆ ಆವಾಸ ಅಸಮತೋಲನಕ್ಕೆ ಕಾರಣವಾದ ಮಾನವನ ಆರೋಗ್ಯ ಹಾನಿಗೂ ನೇರವಾಗಿ ಪ್ರಭಾವ ಬೀರುತ್ತಿವೆ. ಕರ್ಣಾಟಕದಲ್ಲಿ ಪರಿಸರಮಾಲಿನ್ಯಕ್ಕೆ ಕಾರಣವಾಗುತ್ತಿರುವ ಅನೇಕ ಸಂದರ್ಭಗಳನ್ನು ಗುರುತಿಸಬಹುದು. ಮಂಗಳೂರು ಕೃತಕ ಗೊಬ್ಬರ ಕಾರ್ಖಾನೆ, ಕಾರವಾರದಲ್ಲಿನ ಕಾಸ್ಟಿಕ್ ಸೋಡ ಕಾರ್ಖಾನೆ, ದಾಂಡೇಲಿಯ ಕಾಗದದ ಕಾರ್ಖಾನೆ

ಮತ್ತು ಹರಿಹರದ ಕೃತಕ ನೂಲಿನ ಕಾರ್ಖಾನೆಗಳು ಹೊರಸೂಸುವ ವಿಷಾನಿಲಗಳನ್ನು ಇಲ್ಲಿ ಹೆಸರಿಸಬಹುದು. ವಾತಾವರಣದೊಳಕ್ಕೆ ಹೊರಚೆಲ್ಲುವ ಕೃತಕ ರಾಸಾಯನಿಕ ವಸ್ತುಗಳ ಬಗೆಗೆ ನಾವು ಅತ್ಯಂತ ಜಾಗರೂಕರಾಗಿಲ್ಲದಿದ್ದಲ್ಲಿ, ಜೀವಿಗಳಿಗೆ ಅಪರಿಚಿತ ವಾದ ಈ ವಸ್ತುಗಳು ಅತ್ಯಂತ ಅಪಾಯಕಾರಿಗಳಾಗುತ್ತವೆ.

ಆದಾಗ್ಯೂ, ಜೀವಾಣುಗಳು ಈ ರೀತಿಯ ಅಪರಿಚಿತ ರಾಸಾಯನಿಕ ವಸ್ತು ಗಳೊಂದಿಗೆ ವ್ಯವಹರಿಸುವ ತಮ್ಮ ಸಾಮರ್ಥ್ಯವನ್ನು ಅನೇಕ ಸಂದರ್ಭಗಳಲ್ಲಿ ವ್ಯಕ್ತ ಪಡಿಸಿವೆ. ಒಂದು ಕಾಲದಲ್ಲಿ ಡಿ.ಡಿ.ಟಿ., ಸಿಂಪಡಿಸುವುದರಿಂದ ಸೊಳ್ಳೆಗಳು ಸಾಯು ತ್ತಿದ್ದವು. ಆದರೆ ಅವೇ ಸೊಳ್ಳೆಗಳು ಈ ರಾಸಾಯನಿಕ ವಸ್ತುವನ್ನು ನಿರೋಧಿಸುವ ಶಕ್ತಿಯನ್ನು ರೂಢಿಸಿಕೊಂಡಿವೆ. ಇದೇ ರೀತಿ ಮಲೇರಿಯಾ ಜ್ವರಕ್ಕೆ ಕಾರಣವಾದ ಸೊಳ್ಳೆಗಳು ಕ್ವಿನೈನ್‌ಗೆ ಪ್ರತಿರೋಧಶಕ್ತಿಯನ್ನು ರೂಢಿಸಿಕೊಂಡಿವೆ. ಜೀವಾಣುಗಳ ಈ ರೀತಿಯ ಚೈತನ್ಯಪೂರ್ಣ ಬದುಕಿನಿಂದಾಗಿ, ಹೆಚ್ಚು ಅರ್ಥಪೂರ್ಣವಾದ, ಆವಾಸ ಸಮತೋಲನವನ್ನು ಕಾಯ್ದುಕೊಳ್ಳುವ, ಕಾರ್ಯಕ್ರಮಗಳು ರೂಪಿತವಾದಲ್ಲಿ, ಕೃತಕ ರಾಸಾಯನಿಕ ವಸ್ತುಗಳಿಗಿಂತ ಬಹುಕಾಲ ನಿಲ್ಲುವಂತಹ ಪರಿಹಾರಗಳನ್ನು ಕಂಡುಕೊಳ್ಳ ಬಹುದು.

ಜೀವಿಗಳಿಗೆ ಹಾನಿಕಾರಿಯಾದ ಕೀಟಗಳು ಮತ್ತು ಪರೋಪಜೀವಿಗಳು ಈ ರೀತಿಯ ಚೈತನ್ಯ ಶಕ್ತಿಯೊಂದಿಗೆ ನಾವು ಸಮರ್ಥವಾಗಿ ವ್ಯವಹರಿಸಲು, ಬೇರೆ ಜೀವಾಣುಗಳು ಈ ಬಗೆಯ ಕೀಟಗಳು ಮತ್ತು ಪರೋಪಜೀವಿಗಳನ್ನು ನಿಗ್ರಹಿಸಲು ರೂಪಿಸಿಕೊಳ್ಳುತ್ತಿರುವ ವಿಧಾನಗಳು ಮಾರ್ಗದರ್ಶನ ನೀಡುತ್ತವೆ. ಉದಾಹರಣೆಗೆ ಕೀಟ ನಿರೋಧಶಕ್ತಿಯನ್ನು ರೂಢಿಸಿಕೊಂಡು ಹೆಚ್ಚು ಫಸಲು ನೀಡುವ ತಳಿಗಳು ಕೆಲವೇ ವರ್ಷಗಳಲ್ಲಿ ಸತತವಾಗಿ ವಿಕಸನಗೊಳ್ಳುತ್ತಿರುವ ರೋಗಾಣುಗಳನ್ನು ಸಮರ್ಥವಾಗಿ ನಿಗ್ರಹಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಈ ತಳಿಗಳನ್ನು ಹೊಸದಾಗಿ ಪರಿ ಷ್ಕರಿಸಿ ರೋಗ ನಿರೋಧಕ ಶಕ್ತಿಯನ್ನು ಅವು ಮತ್ತೆ ಊರ್ಜಿತಗೊಳಿಸುವಂತೆ ಮಾಡ ಬೇಕಾಗುತ್ತದೆ. ಕೆಲವು ವರ್ಷಗಳ ಹಿಂದೆ ಆಗ್ನೇಯ ಏಷ್ಯದಲ್ಲಿ ಹೆಚ್ಚು ಇಳುವರಿ ನೀಡುವ ಭತ್ತದ ತಳಿ ಒಂದು ಬಗೆಯ ಮಿಡತೆಯ ಹಾವಳಿಯಿಂದಾಗಿ ಸಂಪೂರ್ಣ ನಾಶ ವಾಗುವ ಸ್ಥಿತಿಯಲ್ಲಿತ್ತು. ಸಂಶೋಧನೆಗಳಿಂದಾಗಿ ಕೇರಳದ ಪಟ್ಟಾಂಬಿಯಲ್ಲಿನ ಸ್ಥಳೀಯ ಭತ್ತದ ತಳಿ ಇಂತಹ ಕೀಟ ನಿರೋಧಕ ಶಕ್ತಿಯನ್ನು ಆನುವಂಶಿಕವಾಗಿ ಹೊಂದಿರುವುದು ತಿಳಿದು ಬಂತು. ಕೊನೆಗೆ ಈ ಪಟ್ಟಾಂಬಿ ತಳಿ ಏಷ್ಯ ಖಂಡದ ಭತ್ತದ ಬೆಳೆಯನ್ನು ಕೀಟಗಳ ಹಾವಳಿಯಿಂದ ತಪ್ಪಿಸಿತು. ಈ ಕಾರಣಗಳಿಂದಾಗಿ ಪ್ರಕೃತಿಯಲ್ಲಿನ ಸಸ್ಯ ಮತ್ತು ಪ್ರಾಣಿಗಳ ತಳಿಗಳಲ್ಲಿನ ವೈವಿಧ್ಯತೆಯನ್ನು ಕಾಪಾಡಿ ಕೊಂಡು ಬರಬೇಕಾದದ್ದು ಎಷ್ಟು ಮುಖ್ಯ ಎನ್ನುವುದು ವೇದ್ಯವಾಗುತ್ತದೆ.

ಜೀವಿಗಳಲ್ಲಿನ ವೈವಿಧ್ಯತೆಯನ್ನು ಕಾಪಾಡಿಕೊಂಡು ಬರಲು ಇನ್ನೊಂದು ಮುಖ್ಯ ಕಾರಣವೂ ಇದೆ. ಜೀವಿಗಳಲ್ಲಿನ ವೈವಿಧ್ಯತೆ ಬೇರೆ ಮೂಲಗಳಿಂದೊದಗುವ ಅಪಾಯ

ಗಳನ್ನು ಸಮರ್ಥವಾಗಿ ಎದುರಿಸಿ ಸಮತೆಯನ್ನು ಕಾಯ್ದುಕೊಳ್ಳುವ ಶಕ್ತಿಯನ್ನು ನೀಡುತ್ತದೆ. ಉದಾಹರಣೆಗೆ ಅನೇಕ ಜಾತಿಯ ಮರಗಿಡಗಳನ್ನೊಳಗೊಂಡ ಅರಣ್ಯವು, ಒಂದೇ ಬಗೆಯ ಮರಗಳನ್ನೊಳಗೊಂಡ ಕಾಡುಗಳಿಗಿಂತ, ಕ್ರಿಮಿ ಕೀಟಗಳ ಹಾವಳಿಯನ್ನು ನಿರೋಧಿಸುವ ಸಾಮರ್ಥ್ಯವನ್ನು ಹೆಚ್ಚಾಗಿ ಪಡೆದಿರುತ್ತದೆ. ನಾಗರಹೊಳೆಯ ಬಳಿಯ ತೇಗದ ತೋಪುಗಳಲ್ಲಿ (Plantation) ಮರಗಳನ್ನು ನಾಶಪಡಿಸುವ 'ಲೊರಾಂಥೆಸೆ' ಗುಂಪಿನ ಪರೋಪಜೀವಿ ಸಸ್ಯವಾದ ಹಸುರು ಬದನಿಕೆ ಶೇಕಡ ಎಂಭತ್ತರಷ್ಟಿದ್ದರೆ, ಬಂಡೀಪುರದ ನಿಸರ್ಗಾರಣ್ಯದಲ್ಲಿ ಅವುಗಳ ಸಂಖ್ಯೆ ಶೇಕಡ ಮೂರಕ್ಕೂ ಕಡಿಮೆ. ಇದೇ ರೀತಿ ಇನ್ನೂ ಅನೇಕ ಕೀಟಗಳೂ, ಗಿಡ ಮರಗಳಿಗೆ ತಗಲುವ ರೋಗಗಳೂ ಕರ್ಣಾಟಕದಲ್ಲಿ ಒಂದೇ ಬಗೆಯ ಮರ ಗಿಡಗಳನ್ನು ಬೆಳೆಸುತ್ತಿರುವ ತೋಪುಗಳನ್ನು ನಾಶಮಾಡುತ್ತಿವೆ.

ಇನ್ನು ಕೊನೆಯ ಸೂತ್ರವಾದ ನಿರಂತರ ಫಲದ ಬಗೆಗೆ ತಿಳಿಯೋಣ. ಜೀವಾಣುಗಳು ಪುನರುಜ್ಜೀವನಗೊಳಿಸುವಂತಹ ಮೂಲ ಸಂಪತ್ತು. ಅವು ಬಡಿ ಸಂಪಾದಿಸುವ ಬಂಡವಾಳವಿದ್ದಂತೆ. ಒಮ್ಮೆ ನಶಿಸಿಹೋದರೆ ಮತ್ತೆ ಪುನರುಜ್ಜೀವನಗೊಳಿಸಲಾಗದ ಕಲ್ಲಿದ್ದಲಿನ ನಿಕ್ಷೇಪದಂತಲ್ಲ. ಬಂಡವಾಳವನ್ನು ಭದ್ರಪಡಿಸಿಕೊಂಡು ಬಡ್ಡಿಯನ್ನು ಮಾತ್ರ ತೆಗೆದುಕೊಂಡಂತೆ ಜೀವಾಣುಗಳಿಂದ ನಿರಂತರವಾಗಿ ಉಪಯುಕ್ತ ಸಂಪತ್ತನ್ನು ಪಡೆಯಲು ಸಾಧ್ಯ. ಯಾವಾಗ ನಾವು ಮೂಲ ಬಂಡವಾಳಕ್ಕೇ ಕೈ ಹಾಕುತ್ತೇವೆಯೋ ಆಗ ಬಂಗಾರದ ತತ್ತಿಯಿಡುವ ಕೋಳಿಯನ್ನು ಹೆಚ್ಚು ತತ್ತಿಗಾಗಿ ಕೊಯ್ದಂತಾಗುತ್ತದೆ. ವಾಸ್ತವವಾಗಿ ಇಂದು ನಾವು ಅನೇಕ ರಂಗಗಳಲ್ಲಿ ಇದನ್ನೇ ಮಾಡುತ್ತಿದ್ದೇವೆ. ಸಾಂಪ್ರದಾಯಿಕ ದೋಣಿಗಳಲ್ಲಿ ಮೀನು ಹಿಡಿಯುತ್ತಿದ್ದಾಗ ನಿರಂತರವಾಗಿ ಈ ಕಸುಬು ಫಲ ಕೊಡುತ್ತಿತ್ತು. ಆಧುನಿಕ ಯಂತ್ರ ಚಾಲಿತ ದೋಣಿಗಳಿಂದ ಹೆಚ್ಚು ಹೆಚ್ಚು ಮೀನು ಹಿಡಿಯಲು ಮೊದಲಾದಂತೆ, ನಮ್ಮ ಪಶ್ಚಿಮ ಕರಾವಳಿಯಲ್ಲಿನ ಮೀನು ಸಂಪತ್ತು ನಶಿಸಿ ಹೋಗುತ್ತಿದೆ. ಬೇರೆ ರಂಗಗಳಲ್ಲಿಯೂ ಇಂತಹದೇ ಅನುಭವವನ್ನು ನಾವು ಪಡೆಯಬಹುದು. ಕಾಡುಗಳನ್ನು ಕಡಿದು, ಗೋಮಾಳಗಳನ್ನು ಕೃಷಿಗೆ ಬಳಸಿಕೊಂಡು, ಭೂಮಿಯ ಸಾರವನ್ನು ಹಾಳುಮಾಡಿ ಪ್ರಕೃತಿಯಲ್ಲಿನ ಮೂಲ ಸಂಪತ್ತನ್ನೇ ನಾಶ ಪಡಿಸುತ್ತಿದ್ದೇವೆ.

ವಾಸ್ತವವಾದ ನಮ್ಮ ಪರಿಸರದ ಸಮಸ್ಯೆಗಳನ್ನು ಗಂಭೀರವಾಗಿ ಯೋಚಿಸಿ ಪರಿಣಾಮಕಾರಿಯಾಗಿ ಎದುರಿಸಬೇಕಾದದ್ದು ಅನಿವಾರ್ಯ. ಹಾಗೆ ಮಾಡದಿದ್ದಲ್ಲಿ ನಮ್ಮ ಎಲ್ಲ ಅಭಿವೃದ್ಧಿ ಕಾರ್ಯ ಕ್ರಮಗಳೂ ಅಲ್ಪಾಯುಷಿ ನೀರ್ಗುಳ್ಳೆಗಳಾಗುತ್ತವೆ. ಪರಿಸರದ ಸಮಸ್ಯೆಗಳನ್ನು ಮೂಲದಲ್ಲಿಯೇ ಎದುರಿಸಬೇಕಾದಲ್ಲಿ ಆವಾಸ ವಿಜ್ಞಾನದ ಮೂಲ ತತ್ವಗಳನ್ನು ಪಾಲಿಸಬೇಕಾದದ್ದು ಅನಿವಾರ್ಯ.

(ಅನು : ಎಚ್. ಆರ್. ರಾಮಕೃಷ್ಣರಾವ್

# ಟಿಪ್ಪಣಿಗಳು

**ಜಾತಿ–ಕೆಲವು ಟಿಪ್ಪಣಿಗಳು** / ಕೆ. ಸತ್ಯನಾರಾಯಣ

(i) ಜಾತಿ ಮತ್ತು ಸೃಜನಶೀಲತೆ

(ii) ಜಾತಿ, ಪ್ರತಿಭಟನೆ ಮತ್ತು ಸಂಘಟನೆ

(iii) ಜಾತಿ ಮತ್ತು cultural Incest

## (i) ಜಾತಿ ಮತ್ತು ಸೃಜನಶೀಲತೆ:

(ಅ) ಜಾತಿಯ ಸೃಜನಶೀಲತೆಯನ್ನು ಕುರಿತು ಮಾತನಾಡುವಾಗ ನಾವು ಸ್ಪಷ್ಟಪಡಿಸಿಕೊಳ್ಳಬೇಕಾದ ಸಂಗತಿ ಇದು. ನಾವು ಕೆಲವು ಜಾತಿಗಳು ಸೃಜನಶೀಲವಾದ್ದು ಎಂದು ಹೇಳುತ್ತಿದ್ದೇವೆಯೆ ಅಥವಾ ಇಡೀ ಜಾತಿ ಪದ್ಧತಿಯೆ ಸೃಜನಶೀಲವಾದದ್ದು ಎಂದು ಹೇಳುತ್ತಿದ್ದೇವೆಯೆ ಎಂಬುದು—ಈ ಪ್ರಶ್ನೆಯನ್ನು ಜಾತಿ ಮತಗಳನ್ನು ಕುರಿತು ಸದ್ಯ ನಮ್ಮಲ್ಲಿ ನಡೆಯುತ್ತಿರುವ ಚರ್ಚೆ ಎದುರಿಸಿಲ್ಲವೆನಿಸುತ್ತದೆ. ಇಡಿಯಾಗಿ ಜಾತಿಪದ್ಧತಿ ಯಾವತ್ತು ಸೃಜನಶೀಲವಾಗಿಲ್ಲ ಎಂಬುದು ಎಲ್ಲರಿಗು ತಿಳಿದಿರುವ ಸಂಗತಿಯೆ. ನಮ್ಮ ಧಾರ್ಮಿಕ ಸಾಹಿತ್ಯದ ಆತ್ಯುತ್ತಮ ಅಂಶಗಳಾದ ವೇದ, ಉಪನಿಷತ್ತುಗಳು ಸೃಷ್ಟಿಯಾದಾಗ ಜಾತಿಗಳು ಇದ್ದವು ಎಂಬುದು ನಿಜವಾದರೂ ಆಗ ಜಾತಿಗಳು ವೃತ್ತಿಗಳು ಮಾತ್ರ ಆಗಿದ್ದವು. ಸಮಾಜದಲ್ಲಿ ಚಲನೆ ಇತ್ತು. ವೃತ್ತಿ ಮತ್ತು ಪ್ರವೃತ್ತಿಗಳ ಆಯ್ಕೆಯಲ್ಲಿ ಸ್ವಾತಂತ್ರ್ಯ ಇತ್ತು. (ಈ ಚಲನೆಯ ಸ್ವರೂಪದ ಬಗ್ಗೆ ಚರ್ಚೆ ಸಾಧ್ಯ). ಇಡೀ ಸಮಾಜವೆ ಸೃಜನಶೀಲವಾಗಿದ್ದಂತಹ ಇತಿಹಾಸದ ಒಂದು ಘಟ್ಟ ಇದು. ಈಗ ನಮಗೆ ಕಾಣಿಸುತ್ತಿರುವ ಹಾಗೆ ಜಾತಿಪದ್ಧತಿ ಯಾವ ಸೃಜನಶೀಲತೆಗು ದಾರಿ ಮಾಡಿಕೊಟ್ಟಿಲ್ಲ-Purity (ಮಡಿವಂತಿಕೆ)ಯ ಆಶಯವನ್ನಿಟ್ಟುಕೊಂಡೆ ಹೊರಟ ಜಾತಿಪದ್ಧತಿ ಕೂಡ ಮಡಿಯಾಗಿ ಉಳಿದಿಲ್ಲ. ವಿದೇಶಿಯರ ಧಾಳಿಗಳು, ಸಾಮಾಜಿಕ ಅನ್ಯಾಯದ ವಿರುದ್ಧ ಈ ನೆಲದಲ್ಲೆ ಆಗಿಂದಾಗ್ಗೆ ಹುಟ್ಟಿದ ಚಳುವಳಿಗಳು–ಜಾತಿಪದ್ಧತಿ ಕೂಡ ಮಡಿಯಾಗಿಯೆ ಉಳಿಯಲು ಬಿಟ್ಟಿಲ್ಲ. ಜಾತಿಗಳು ಮತ್ತು ಜಾತಿಪದ್ಧತಿ ಕೂಡ ಹೀಗೆ ಅನೇಕ ಮೈಲಿಗೆಗಳಿಗೆ, ಸಂಕ್ರಮಣಗಳಿಗೆ ಕಾಲಕಾಲಕ್ಕೆ ತುತ್ತಾಗುತ್ತಿರುವುದರಿಂದ–ನಿರ್ದಿಷ್ಟವಾಗಿ ಇಗೋ ಇದೇ 'ಜಾತಿಪದ್ಧತಿ' ಅಥವಾ 'ಜಾತಿ ವ್ಯವಸ್ಥೆ' ಎಂದು ನಾವು ತೋರಿಸಲು ಕೂಡ ಆಗುವುದಿಲ್ಲ–ಆದ್ದರಿಂದ ಕೇಳಿಕೊಳ್ಳಬೇಕಾದ ಪ್ರಶ್ನೆ ಇದಿರಬಹುದೆ ಎಂಬ ಅನುಮಾನ ನನ್ನದು; ಜಾತಿಪದ್ಧತಿ ಅಥವಾ ಕೆಲವು ಜಾತಿಗಳು ಸೃಜನಶೀಲವಾಗಿದ್ದರೆ–ನಾವು ಅದನ್ನು ಜಾತಿಗೆ ಅಥವಾ ಜಾತಿಪದ್ಧತಿಗೆ ಆರೋಪಿಸಬೇಕೊ? ಅಥವಾ ಅವು ಸೃಜನಶೀಲವಾಗಲು, ಮೈಲಿಗೆಯಾಗಲು ಬಂದ ಒತ್ತಾಯಗಳಿಗೆ–ಆ ಸೃಜನಶೀಲತೆಯನ್ನು ಆರೋಪಿಸಬೇಕೋ? ಯಾವ ಯಾವ ಜಾತಿಗಳು ತಮ್ಮ ಜಾತಿಗೆ ಮೈಲಿಗೆಯನ್ನು ತಾವೆ ಉಂಟು ಮಾಡಿಕೊಳ್ಳಲು ನಿರ್ಧರಿಸಿಹವೊ ಅಥವಾ ಜಾತಿಪದ್ಧತಿಗೆ ಇಡಿಯಾಗಿ ಮೈಲಿಗೆ ಮಾಡಲು ನಿರ್ಧರಿಸಿದವೊ ಆ ಜಾತಿಗಳು ಆ ಕಾಲದ ಒತ್ತಾಯಗಳನ್ನು, ಸವಾಲುಗಳನ್ನು ಸಮರ್ಥವಾಗಿಯೆ ಎದುರಿಸಿವೆ–ಅನೇಕ ಜಾತಿಗಳು, ಬುಡಕಟ್ಟುಗಳು ತಮ್ಮ ಸಾಧನೆಯ ಮೂಲಕ ಕ್ಷತ್ರಿಯರಾಗಿ ಪರಿವರ್ತಿತ

ಪಾದುದು, ಸಾಧನೆಯಿಲ್ಲದ ಅನೇಕ ಕ್ಷತ್ರಿಯ ಜಾತಿಗಳು ಕ್ರಮೇಣ ಶೂದ್ರ ಜಾತಿಗಳಾದುದು ಇತಿಹಾಸದಲ್ಲಿ ಸುಲಭವಾಗಿ ಗುರುತಿಸಬಹುದಾದ ಸಂಗತಿ. ಸ್ವಾತಂತ್ರ್ಯ ಚಳುವಳಿಯಲ್ಲಿ ನೇತೃತ್ವ ವಹಿಸಿದ ಸಂಸ್ಕೃತೀಕರಣಕ್ಕೊಳಗೊಂಡ ಜಾತಿಗಳು (ಬ್ರಾಹ್ಮಣ, ಕಾಯಸ್ಥ, ಬನಿಯಾ ಇತ್ಯಾದಿ) ಕೂಡ ಇದೇ ಪ್ರಕ್ರಿಯೆಗೆ ಬೇರೆ ಬೇರೆ ಮಟ್ಟದಲ್ಲಿ ಒಳಗಾಗಿರುವುದನ್ನು ಇತಿಹಾಸದಲ್ಲಿ ನಾವು ಕಾಣಬಹುದು.

(ಅ) ವೃತ್ತಿಪರ ಜಾತಿ (Artisan Castes) ಗಳನ್ನು ಕುರಿತು ಮಾತನಾಡುವಾಗ ಈ ಜಾತಿಗಳು ಸೃಜನಶೀಲವಾದುವು ಎಂದು ನಾವು ಹೇಳುತ್ತೇವೆ. ಇದು ನಿಜ. ಆದರೆ ಒಂದು ಪ್ರಶ್ನೆ. ಒಬ್ಬ ವ್ಯಕ್ತಿಗೆ ಆತ ಮಾಡುವ ಕೆಲಸ ಸೃಜನಶೀಲವಾಗಬೇಕಾದರೆ ಮುಖ್ಯ ವಾದ್ದು ಅದನ್ನು ಅವನೇ ಆಯ್ಕೆ ಮಾಡಿಕೊಂಡಿದ್ದಾನೆಯೆ ಇಲ್ಲವೆ ಎಂಬುದು. ವೃತ್ತಿ ಜಾತಿಗಳಲ್ಲಿ ವೃತ್ತಿ ಹರಿದುಬರುವುದು ಅನುವಂಶಿಕವಾಗಿ. ವೃತ್ತಿಜಾತಿಗಳ ಸದಸ್ಯರಲ್ಲೂ ಎಲ್ಲಿಯತನಕ ಸ್ವತಃ ಆಯ್ಕೆಯಿರುವುದಿಲ್ಲವೋ, ಎಲ್ಲಿಯತನಕ ಅದು ಅನುವಂಶಿಕವಾಗಿರುತ್ತದೋ ಅಷ್ಟರ ಮಟ್ಟಿಗೆ ಅದು ಸೃಜನಶೀಲತೆಯನ್ನು ಸಂಕುಚಿತಗೊಳಿಸುತ್ತದೆ ಎಂಬುದನ್ನು ನಾವು ಒಪ್ಪಿಕೊಳ್ಳ ಬೇಕು. ಈ ಮಿತಿಯೊಳಗೂ ನಾವು ಗಮನಿಸಬೇಕಾದ ಮಹತ್ವದ ಸಂಗತಿಯೆಂದರೆ ಆಧುನಿಕ ಕಾರ್ಮಿಕರು. ಯಂತ್ರ ನಾಗರಿಕತೆಯ ಮಧ್ಯೆ ಕೆಲಸ ಮಾಡುವಾಗ ಅವರಿಗೆ ದೊರಕುವ ವಾತಾವರಣಕ್ಕಿಂತಲೂ ವೃತ್ತಿಜಾತಿಗಳು ತಮ್ಮ ವಾತಾವರಣವನ್ನು ಇನ್ನೂ ಆರೋಗ್ಯಕರ ವಾಗಿಯೂ, ಅಪ್ಯಾಯಮಾನವಾಗಿಯೂ ಉಳಿಸಿಕೊಂಡಿವೆ ಎಂಬುದು. ಈ ಅಂಶ ಯಾವತ್ತೂ ಚಿಂತಕರನ್ನು ಆಕರ್ಷಿಸಿದೆ. ಈ ಆಕರ್ಷಣೆಯೆ ವಿಕೇಂದ್ರೀಕರಣ, ಗ್ರಾಮಸ್ವರಾಜ್ಯ Guild Socialism ಮುಂತಾದ ಕಲ್ಪನೆಗಳಲ್ಲಿ ಆದರ್ಶವಾಗಿ ರೂಪುಗೊಂಡಿರುವುದು. ವೃತ್ತಿಗಳು ಅನುವಂಶಿಕವಾಗದ ಹಾಗೆ ಆದರೆ ವೃತ್ತಿಜಾತಿಗಳು ಕೆಲಸ ಮಾಡುವ ವಾತಾವರಣದ ಆರೋಗ್ಯ ಕರವಾದ ಅಪ್ಯಾಯಮಾನವಾದ ಅಂಶಗಳನ್ನು ಉಳಿಸಿಕೊಳ್ಳುವ ಬಗೆ ಹೇಗೆ?

(ಇ) ಸೃಜನಶೀಲ ಬರವಣಿಗೆಗಳಿಗೂ ಜಾತಿಗು ಇರುವ ಸಂಬಂಧ ಎಂತಹುದು? ಒಂದು ಜಾತಿಯಲ್ಲಿ ನಾವು ಹುಟ್ಟುವುದರಿಂದ ಅದರೊಳಗೆ ನಾವು ನಮ್ಮ ಜೀವನದ ಮುಖ್ಯ ಭಾಗವನ್ನು ಕಳೆಯುವುದರಿಂದ ಜಾತಿ ನಮಗೆ ಒಂದು ವಿಶಿಷ್ಟ ಸಾಂಸ್ಕೃತಿಕ ಚೌಕಟ್ಟಿಗೆ 'ಒಳಗಿನ' ವರನ್ನಾಗಿ ಮಾಡುತ್ತದೆ. ಕೆಲವು ವಿಶಿಷ್ಟವಾದ ಒಳನೋಟಗಳನ್ನು ನೀಡುತ್ತದೆ. ಹಾಗೆ ಕೆಲವು ದೌರ್ಬಲ್ಯಗಳನ್ನು ಕೂಡ. ಇವೆಲ್ಲ ನಮ್ಮ ಬೆಳೆಯುವ ವ್ಯಕ್ತಿತ್ವದ ಒಂದು ಭಾಗವಾಗು ತ್ತವೆ. ಇದೆಲ್ಲ ನಿಜವಾದರೂ ಜಾತಿ ಇಲ್ಲದ ದೇಶಗಳಲ್ಲೂ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವೈಶಿಷ್ಟ್ಯವನ್ನು ದೌರ್ಬಲ್ಯವನ್ನು. ಹೊಂದಿರುತ್ತಾನೆಂಬುದು ಕೂಡ ಅಷ್ಟೇ ಮುಖ್ಯ.

ಆದರೆ ಸೃಜನಶೀಲತೆಯ ನೆಲೆಗಳು ಇಷ್ಟು ಸೀಮಿತವಾದ ಆಶ್ರಯದಲ್ಲಿ ಹುಟ್ಟುವುದಿಲ್ಲ-ಪ್ರತಿನಿತ್ಯದ ಜೀವನ. ವಿವರಗಳೆ ಬೇರೆ, ಒಂದು ಕಲಾಕೃತಿಯ ಜೀವನದ ವಿವರಗಳೆ ಬೇರೆ, ಇವೆರಡಕ್ಕೂ ವ್ಯತ್ಯಾಸ ಗೊತ್ತಿಲ್ಲದೆ ಇದ್ದಾಗ ಮಾತ್ರ ಪ್ರಗತಿಶೀಲರು ಬರೆದಂತಹ ಕಾದಂಬರಿ ಗಳು. ಚದುರಂಗದ 'ವೈಶಾಖ'ದಂತಹ ಕಾದಂಬರಿಗಳು ಹುಟ್ಟಿಕೊಳ್ಳುತ್ತವೆ. ಸೃಜನಶೀಲತೆಗೆ ಅನುಭವದಷ್ಟೆ ಅಥವಾ ಅದಕ್ಕಿಂತ ಹೆಚ್ಚು ಮುಖ್ಯವಾದ್ದು-ಒಂದು ನಿರ್ದಿಷ್ಟ ವಿಶಿಷ್ಟ ಅನುಭವವನ್ನು ಎಲ್ಲ ಮನುಷ್ಯರಿಗೆ ಒದಗಬಹುದಾದಂತಹ ಒಂದು ಮಾನವ ಸನ್ನಿವೇಶವನ್ನಾಗಿ ಪರಿವರ್ತಿಸಲು ಬೇಕಾದ ನೈತಿಕ ಪ್ರಜ್ಞೆ ಮತ್ತು ಕಲಾತ್ಮಕ ಪ್ರತಿಭೆ. ಇವೆರಡೂ ಇಲ್ಲದ ಅನುಭವ ಶ್ರೀಮಂತಿಕೆ ಲೇಖಕನ ಆತ್ಮವಿಶ್ವಾಸವನ್ನು ಅನಗತ್ಯವಾಗಿ ಹೆಚ್ಚಿಸಿ ಒಂದು ರೀತಿಯ Indulgent ಅಥವಾ ಭಾವುಕ ಬರವಣಿಗೆಯಲ್ಲಿ ತೊಡಗಿಸಿಬಿಡಬಹುದು-ವಿಶಿಷ್ಟ ಅನುಭವ ದಿಂದ ಹುಟ್ಟುವ ನೈತಿಕ ಒತ್ತಾಯ, ಆ ನೈತಿಕ ಒತ್ತಾಯದಲ್ಲೇ ಅಂತರ್ಗತವಾಗಿ ಅಡಗಿರುವ

ಕಲಾತ್ಮಕ ಪ್ರತಿಭೆಯನ್ನು ಕುರಿತು ನಾವು ಯೋಚಿಸಿದರೆ ಸೃಜನಶೀಲತೆಯ ಆಳವಾದ ನೆಲೆಗಳನ್ನು ಹುಡುಕಬಹುದೆನಿಸುತ್ತದೆ–ನಮ್ಮ ಚಳುವಳಿಯ ಸಂದರ್ಭದಲ್ಲಿ ನಡೆದ ಕೆಲವು ಸಾಹಿತ್ಯ ಮತ್ತು ಸಾಹಿತ್ಯೇತರವಾದ ವಿವಾದಗಳ ಕಾರಣದಿಂದ ಈ ಅಂಶ ಸಾಹಿತ್ಯಾಭ್ಯಾಸಿಗಳ ಗಮನವನ್ನು ಸಾಕಷ್ಟು ಸೆಳೆದಿಲ್ಲ. ನಮಗಾಗಿರುವ ಅನುಭವಗಳಲ್ಲಿ ನೈತಿಕ ಒತ್ತಾಯಗಳನ್ನು ಹುಟ್ಟಿಸುವ ಶಕ್ತಿ ಇದೆಯೆ ? ಇಲ್ಲವೆ ? ಇದ್ದರೆ ಆ ನೈತಿಕ ಒತ್ತಾಯದಲ್ಲಿ ಕಲಾತ್ಮಕ ಪ್ರತಿಭೆ ಅಡಕವಾಗಿದೆಯೆ ? ಇದನ್ನು ಕುರಿತು ಹೆಚ್ಚು ಚರ್ಚೆ ನಡೆಯಬೇಕಾಗಿದೆ. ನಮಗೆ ಇರುವ ಅನುಭವಗಳು ನೀಡುವ ಆತ್ಮವಿಶ್ವಾಸದಿಂದ ಹುಟ್ಟುವ ಸೃಜನಶೀಲತೆ ಗಾಢವಾದದ್ದೊ. ಅಥವಾ ನೈತಿಕ ಒತ್ತಾಯಗಳನ್ನು ನೀಡಬಲ್ಲ ಅನುಭವದಿಂದ ಹುಟ್ಟುವ ಸೃಜನಶೀಲತೆಯ ನೆಲೆ ಗಾಢವಾದದ್ದೊ ? ಒಕ್ಕೂಟ, ಬಂಡಾಯ, ದಲಿತ ಸಾಹಿತ್ಯ ಚಳುವಳಿಗಳು, ಸೃಜನಶೀಲತೆ ಗಾಢವಾಗಲು ಬೇಕಾದ ನೈತಿಕ ಎಚ್ಚರ ಮತ್ತು ಒತ್ತಾಯದ ಪ್ರಶ್ನೆಯನ್ನು ಹಿಂದಕ್ಕೆ ಹಾಕಿ ಸೃಜನಶೀಲತೆಯನ್ನು ತೆಳುವಾಗಿಸುವ, ಸುಲಭ ಸಾಧ್ಯವಾಗಿಸುವ ಆತ್ಮ ವಿಶ್ವಾಸದ ಪ್ರಶ್ನೆಯನ್ನು ಮುಂದೆ ತಳ್ಳಿವೆ. ಇದು ಎಂತಹ ವಿಪರ್ಯಾಸಕ್ಕೆಡೆ ಕೊಟ್ಟಿದೆಯೆಂದರೆ-ತರುಣ ಲೇಖಕರು. ಮತ್ತು ವಿಮರ್ಶಕರು ಈಗಾಗಲೇ ನಿರ್ದಿಷ್ಟವಾಗಿರುವ ಕೆಲವು ಅನುಭವಗಳನ್ನು ಅವುಗಳಿಗೆ ಈಗಾಗಲೇ ನೀಡುತ್ತಿರುವ ಅರ್ಥವನ್ನು ತಮ್ಮ ಜೀವನದಲ್ಲಿ ಮತ್ತು ಕೃತಿಗಳಲ್ಲಿ ಹುಡುಕುತ್ತಿರುತ್ತಾರೆ–ನಾವು ಬಹುವಾಗಿ ಗೌರವಿಸುವ ಮಾಸ್ತಿ, ಕಾರಂತ, ಕುವೆಂಪು, ಬೇಂದ್ರೆ ಇಂತಹವರ ಸೃಜನಶೀಲ ನೆಲೆಗಳು ಯಾವುವು ? ಅವು ಗಾಢವಾದದ್ದು ಹೇಗೆ ? ದಸ್ತೆವಸ್ಕಿ, ಟಾಲ್‌ಸ್ಟಾಯ್, ಗಾಂಧಿ. ಕಮೂ ಇವರಂತಹ ಬರವಣಿಗೆಗಳನ್ನು ನಾವು ಓದುವುದು ನೈತಿಕ ಎಚ್ಚರ ಪಡೆಯುವುದಕ್ಕಾಗಿಯೊ ಅಥವಾ ಅನುಭವ ಪಡೆಯುವದಕ್ಕಾಗಿಯೋ. ಮೇಲೆ ಹೇಳಿದ ಲೇಖಕರೆಲ್ಲರ ಗಾಢ ಸೃಜನಶೀಲತೆಯ ಗುಟ್ಟು ಅವರೆಲ್ಲರ ಕೃತಿಗಳಲ್ಲೂ ಘಾಟು ಹೊಡೆಯುವ ನೈತಿಕ ಎಚ್ಚರ ಮತ್ತು ಕೃತಿ ಕಟ್ಟುವ ಸಾಮರ್ಥ್ಯವೆ ಅಲ್ಲವೆ ? (ಈ ಹಿನ್ನೆಲೆಯಲ್ಲಿ ನೋಡಬಹುದಾದ ಟಿಪ್ಪಣಿ 'ಅಡಿಗರ ಸಾಹಿತ್ಯದಲ್ಲಿ ಮಾನವೀಯತೆ' ಸಾಕ್ಷಿ-41)

## (ii) ಜಾತಿ, ಪ್ರತಿಭಟನೆ ಮತ್ತು ಸಂಘಟನೆ :

ಜಾತಿಪದ್ಧತಿಯ ಅಸಹ್ಯಗಳು, ಅರೆಕೊರೆಗಳು ಹಿಂದೂಗಳಿಗೆ ಗೊತ್ತಿಲ್ಲವೆಂದಲ್ಲ–ಆದರೆ ಜಾತಿ ಪದ್ಧತಿಯ ಅತಿ ದೊಡ್ಡ ವೈಚಿತ್ರ್ಯವೆಂದರೆ ಇಡಿಯಾಗಿ ಹಿಂದೂ ಸಮಾಜ ಅದರ ವಿರುದ್ಧ ಪ್ರತಿಭಟಿಸುವಷ್ಟು ಅದು ಸವಾಲು ಹಾಕಿಲ್ಲ. ಇದಕ್ಕೆ ಮುಖ್ಯ ಕಾರಣ ಜಾತಿಪದ್ಧತಿ ತನ್ನ ಇತಿಹಾಸದುದ್ದಕ್ಕೂ ಕಾಲದಿಂದ ಕಾಲಕ್ಕೆ ಕೆಲವು ಜಾತಿಗಳಿಗೆ ವಿಶಿಷ್ಟವಾದ ಅನುಕೂಲವನ್ನು ನೀಡುತ್ತಾ ಹೋಗುತ್ತದೆ-ಕೆಲವು ಶತಮಾನಗಳಲ್ಲಿ ಬ್ರಾಹ್ಮಣರಿಗೆ ಕ್ಷತ್ರಿಯುರಿಗೆ ಇನ್ನು ಕೆಲವು ಕಾಲ ಬ್ರಾಹ್ಮಣರಿಗೆ, ಜಮೀನ್ದಾರ ಜಾತಿಗಳಿಗೆ, ಎಲ್ಲ ಕಾಲದಲ್ಲೂ ವಣಿಕ ಜಾತಿಗಳಿಗೆ-ಹೀಗೆ ಉದಾಹರಣೆಗಳನ್ನು ಕೊಡುತ್ತಾ ಹೋಗಬಹುದು. ಈವತ್ತಿನ ಪರಿಸ್ಥಿತಿಯಲ್ಲಿ ಅಂದರೆ ಪಾರ್ಲಿಮೆಂಟರಿ ಡೆಮಾಕ್ರಸಿಯ ಚೌಕಟ್ಟಿನಲ್ಲಿ ಅದು ಅನುಕೂಲವಾಗುವುದು. ಭೂಮಿಯ ಒಡೆತನದ ಪ್ರಮಾಣ ಮತ್ತು ತನ್ನ ಸಂಖ್ಯಾಬಲದ ಹಿನ್ನೆಲೆಯಲ್ಲಿ ರಾಜ್ಯ ವ್ಯವಸ್ಥೆಯನ್ನು ನಿಯಂತ್ರಿಸಬಲ್ಲ ಮಧ್ಯ ಜಾತಿಗಳಿಗೆ (Intermediory Castes) ಜಾತಿಪದ್ಧತಿ ಇರಬೇಕು. ಜಾತಿಯ ಮೂಲಕವೇ ಕೆಲವು ಸವಲತ್ತು ಸಹಾಯಗಳ ಹಂಚಿಕೆ ನಿರ್ಧಾರವಾಗಬೇಕೆಂಬ ಒತ್ತಾಯ ಬರುವುದು ಮಧ್ಯಜಾತಿಗಳಿಂದಲೆ.

ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಪ್ರತಿಯೊಬ್ಬ ಹಿಂದೂವೂ ಗೊತ್ತಿದ್ದೊ ಗೊತ್ತಿಲ್ಲದೆಯೊ ತನ್ನ ಮನಸ್ಸಿನಲ್ಲಿ Elite Society Connection ಹೊಂದಿರುತ್ತಾನೆ.

ಆರ್ಥಿಕವಾಗಿ ಹಿಂದುಳಿದಿರುವ ಜಡವಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲ ಸಮಾಜ ಸುಧಾರಣಾ ಹೋರಾಟಗಳ -ಹೀಗೆ Elite Movementಗಳಾಗಿ ಪರ್ಯವಸಾನ ಹೊಂದುವುದು ಅನಿವಾರ್ಯವೇನೊ ? ಈ ಕಾರಣದಿಂದಾಗಿಯೆ ಸಾಮಾಜಿಕ ನ್ಯಾಯ ಕಲ್ಪನೆಯಿಂದ ಪ್ರಾರಂಭವಾದ ಹುದ್ದೆ ಮೀಸಲಾತಿಯಂತಹ ಕಾರ್ಯಕ್ರಮಗಳು ಕೂಡ Elite Societyಯ ಪರವಾಗಿಯೊ, ಜಾತಿಪದ್ಧತಿಯ ಪರವಾಗಿಯೊ ನಡೆಯುವ ವಾದವಾಗಿ ಕಾಣುತ್ತವೆ. ಏನೂ ಇಲ್ಲದವರ ನಡುವೆ ಸ್ವಲ್ಪವಾದರೂ ಆಸ್ತಿಪಾಸ್ತಿ, ಹುದ್ದೆ ಪ್ರತಿಷ್ಠೆಗಳನ್ನು ಹೊಂದಿ ಮೆರೆಯುವ ಆಸೆ ಯಾರಿಗಿರುವುದಿಲ್ಲ. ಸಾಮಾಜಿಕ ಪ್ರಜ್ಞೆ ಸಾರ್ವಜನಿಕ ಪ್ರಜ್ಞೆಗೆ ಅಷ್ಟೇನು ಹೆಸರುವಾಸಿಯಲ್ಲದ ಹಿಂದೂಗಳು-ಆರ್ಥಿಕ ಉತ್ಪಾದನೆ ಮತ್ತು ಆರ್ಥಿಕ ಸಂಘಟನೆಗಳಲ್ಲ ಬೇರೆ ಯಾರಿಂದಲಾದರೂ ಆಗಲಿ ಅದನ್ನು ಹಂಚಿಕೊಳ್ಳುವುದಕ್ಕೆ ನಡೆಯುವ ಹೋರಾಟ, ಅದರಿಂದ ಪಡೆಯುವ ಪಾಲು ಮಾತ್ರ ನಮ್ಮದಾಗಿರಲಿಎಂಬ ಧೋರಣೆಯನ್ನು ತಳೆದಿರಲಿಕ್ಕೂ ಸಾಕು-ಈ ವಿಷಯವನ್ನು ಹೆಚ್ಚು ವಿವರಿಸದೆ ನಮ್ಮ ಯಾವ ಸಮಾಜ ಸುಧಾರಣಾ ಚಳುವಳಿಗಳೂ ತಮ್ಮ ಉದ್ದೇಶಗಳಿಗೆ ಅಗತ್ಯವಾದ ಆರ್ಥಿಕ ಪ್ರಶ್ನೆಗಳನ್ನು ಎದುರಿಸಿಲ್ಲವೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು ಒಳ್ಳೆಯದು-ಎಂದು ಮಾತ್ರ ಸೂಚಿಸುತ್ತೇನೆ.

ನಮ್ಮ ಜಾತಿವ್ಯವಸ್ಥೆಯಷ್ಟೆ ವೈವಿಧ್ಯಮಯ ಮತ್ತುಗೊಂದಲಮಯವಾದ್ದು.ಅದರ ವಿರುದ್ಧ ನಮ್ಮ ಪ್ರತಿಭಟನಾ ಕ್ರಮಗಳು. ಜಾತಿಯ ಆಧಾರದ ಮೇಲೆ ಹುಟ್ಟುವ ಸಂಘಟನೆಗಳ ಉದ್ದೇಶವು ಕೂಡ ಜಾತಿಯಿಂದ ಜಾತಿಗೆ ಭಿನ್ನವಾಗುತ್ತವೆ. ಮುಖ್ಯವಾಗಿ ಗಮನಿಸಬೇಕಾದ್ದು ಮಧ್ಯ ಜಾತಿಗಳ ಮತ್ತು ಹರಿಜನ-ಗಿರಿಜನರ ಸಂಘಟನೆಗಳಿಗಿರುವ ವ್ಯತ್ಯಾಸ. ಹರಿಜನ-ಗಿರಿಜನರ ಸಂಘಟನೆ ತಮ್ಮ ಪ್ರತ್ಯೇಕತೆಯನ್ನು ವೈಶಿಷ್ಟ್ಯವನ್ನು ಎಷ್ಟೇ ಒತ್ತಿ ಹೇಳಿದರೂ ಅವುಗಳ ಮೂಲ ಉದ್ದೇಶ Self-disslving. ಈ ಮಾತನ್ನು ದಲಿತರು ಒಪ್ಪಿಕೊಳ್ಳುವುದಿಲ್ಲವಾದರೂ ಸುಶಿಕ್ಷಿತರಾದ ದಲಿತರು ತಮ್ಮ ದಿನನಿತ್ಯದ ಜೀವನದಲ್ಲಿ ಇಟ್ಟುಕೊಳ್ಳುವ ಸಂಬಂಧಗಳು, ಸ್ನೇಹಿತರವಲಯ ಇವುಗಳನ್ನು ಗಮನಿಸಿದರೆ ಇವರ ಮುಖ್ಯವಾದ ಬಯಕೆ ತಮ್ಮ ಅಸ್ತಿತ್ವವನ್ನು, ಹಿನ್ನೆಲೆಯನ್ನು ಪ್ರತ್ಯೇಕವಾಗಿಡದೆ, ಸಮಾಜದಲ್ಲಿ ಲೀನವಾಗುವುದು ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಆದರೆ ಮಧ್ಯ ಜಾತಿಗಳ ಸಂಘಟನೆಗಳು ತಮ್ಮ ಜಾತಿಯ ಪ್ರತ್ಯೇಕ ಅಸ್ತಿತ್ವವನ್ನು, ಉಳಿವನ್ನು ಬಯಸುತ್ತವೆ, ಒತ್ತಿ ಹೇಳುತ್ತವೆ. ಆ ದೃಷ್ಟಿಯಿಂದಲೆ ಕೆಲಸ ಮಾಡುತ್ತವೆ-ಹೆಚ್ಚು ವಿರೋಧಾಭಾಸ ಕಂಡುಬರುವುದು ಬ್ರಾಹ್ಮಣರ ಸಂಘಟನೆಗಳಲ್ಲೆ. ಮನೆಯೊಳಗೂ ತಮ್ಮ ಸಂಘಟನೆಯಲ್ಲೂ ತಾವೇ ಮೇಲೆಂದು ಭಾವಿಸುವ ಈ ಅಲ್ಪಸಂಖ್ಯಾತರು ವಾಸ್ತವ ಜೀವನದಲ್ಲಿ ಬಹುಸಂಖ್ಯಾತರೊಡನೆ ಬೆರೆಯುವುದರಿಂದ ಮಾತ್ರ ನಮ್ಮ ಸಮಸ್ಯೆಗಳು ಪರಿಹಾರ ಪಡೆಯಬಲ್ಲವು ಎಂದು ತಿಳಿಯುತ್ತಾರೆ. ಈ ವಿರೋಧಾಭಾಸದಿಂದಾಗಿಯೆ ಬ್ರಾಹ್ಮಣರು, ಇತರೆ ಜಾತಿಗಳವರು ವಿಶೇಷವಾಗಿ ಮಧ್ಯ ಜಾತಿಗೆ ಸೇರಿದ ಮಂತ್ರಿಗಳು, ರಾಜಕಾರಣಿಗಳು, ಬುದ್ಧಿಜೀವಿಗಳು ತಪ್ಪು ಮಾಡಿದಾಗಲೂ ಟೀಕಿಸಲು ಹಿಂಜರಿಯುವುದು— ವಿರೋಧಾಭಾಸ ಮತ್ತು ಸಂಕೋಚಗಳಿಂದ ಕೂಡಿದ ಬ್ರಾಹ್ಮಣರ ಈ ನಿಲುವಿನಿಂದ ಹೆಚ್ಚು ಅನುಕೂಲವಾಗುವುದೇ ಮಧ್ಯ ಜಾತಿಗಳವರಿಗೆ—

ಆದರೆ ಎಲ್ಲ ಜಾತಿಗಳವರಲ್ಲೂ ಒಂದು ಸಮಾನಾಂಶವಿದೆ. ಬಡತನ ; ನಿರುದ್ಯೋಗ, ಹಸಿವು ಇಂತಹ ಮೂಲಭೂತ ಪ್ರಶ್ನೆಗಳು, ಸಮಸ್ಯೆಗಳನ್ನು ತಮ್ಮ ಜಾತಿಯವರು ಮಾತ್ರವೆ ಅನುಭವಿಸುತ್ತಿದ್ದಾರೆ. ಪರಿಹಾರವು ಕೂಡ ಜಾತಿಯ ಆಧಾರದ ಮೇಲೆಯೆ ದಕ್ಕುತ್ತದೆ ಎಂದು ನಂಬುತ್ತಾರೆ. ಪ್ರತಿಯೊಬ್ಬರಿಗೂ ಅವರವರ ಜಾತಿಯ ಸಮಸ್ಯೆಗಳೆ ದೊಡ್ಡದಾಗಿ ಕಾಣುತ್ತವೆ. ಇತರೆ ಜಾತಿಗಳವರು ಯಾವಾಗಲೂ ನಮಗಿಂತ ಹೆಚ್ಚು ಸುಖವನ್ನು ಅನುಭವಿಸುತ್ತಿರುವವರಂತೆ

ಕಾಣುತ್ತಾರೆ—ನಾನು ಹಿಂದೆ ಹೇಳಿದ ಹಾಗೆ ಈ ರೀತಿಯ ಕಲ್ಪನೆಗಳು ಹುಟ್ಟಿಕೊಳ್ಳುವುದು ಅಭಾವವನ್ನೆ ಆಧಾರವಾಗಿಟ್ಟುಕೊಂಡ ಸಂಸ್ಕೃತಿಯಲ್ಲಿ. (Culture of Scarcity) ಅಭಾವ ಸಂಸ್ಕೃತಿಯು ಸಮಾಜದಲ್ಲಿ ಪ್ರತಿಷ್ಠೆ, ಅಹಂ, ಅಸೂಯೆ, ಹೇಗಾದರೂ ಮಾಡಿ ಯಶಸ್ಸು ಪಡೆದು ಹೀರೋ ಆಗುವ ಪ್ರವೃತ್ತಿಗಳಿಗೆ ಮನುಷ್ಯ ಜೀವನದಲ್ಲಿ ಸಹಜವಾಗಿ ಸಿಗಬೇಕಾದ್ದಕ್ಕಿಂತ ಹೆಚ್ಚು ಪ್ರಾಶಸ್ತ್ಯ ದೊರಕುತ್ತದೆ

## (iii) ಜಾತಿಪ್ರೇಮ ಮತ್ತು Cultural Incest

ಇಂಡಿಯಾದಲ್ಲಿ ಪ್ರತಿಯೊಬ್ಬನು ತನ್ನ ಜಾತಿಯ ಪರವಾಗಿ ವಾದಿಸುವುದು, ತನ್ನ ಜಾತಿಯವರೇ ಮುಂದೆ ಬರಬೇಕೆಂದು ಇಷ್ಟಪಡುವುದು ತಪ್ಪು ಎನ್ನುವುದು ನಿಜವಾದರೂ ಜಾತಿ ಪ್ರೇಮಕ್ಕಿರುವ ಮನೋವೈಜ್ಞಾನಿಕ ಆಶಯಗಳನ್ನು ತಿರಸ್ಕರಿಸುವ ಹಾಗಿಲ್ಲ-ನಮ್ಮ ಬಾಲ್ಯ ಮತ್ತು ಯೌವ್ವನವನ್ನು ಹೆಚ್ಚಿನ ಪಾಲು ನಾವು ಕಳೆಯುವುದು ನಮ್ಮ ಜಾತಿಯ ವಾತಾವರಣ ದಲ್ಲೇ. ಈ ಹಿನ್ನೆಲೆಯನ್ನು ಪ್ರಜ್ಞಾಪೂರ್ವಕವಾಗಿ ತಿರಸ್ಕರಿಸುವುದು ಬಲು ಕಷ್ಟ. ನಮ್ಮ ವ್ಯಕ್ತಿತ್ವವನ್ನು ರೂಪಿಸುವ ತೀರಾ ಖಾಸಗಿ ಮತ್ತು ಅತಿ ಮುಖ್ಯವಾದ ಅನುಭವಗಳು ಜಾತಿಯ ಚೌಕಟ್ಟಿನೊಳಗೆ ಸಂಭವಿಸಿರುತ್ತವೆ. ಪ್ರಜ್ಞಾವಂತರಾದ ಮೇಲೆ ನಾವು ಪಡೆಯುವ ಎಷ್ಟೋ ಅನುಭವಗಳು ಕೂಡ ಈ ಹಿನ್ನೆಲೆಗೆ ಸಂವಾದಿಯಾಗಿಯೂ, ಪೂರಕವಾಗಿಯೂ ಇರುತ್ತವೆ. ನಮಗೆ ದೊರಕುವ ಅನೇಕ ಸೌಲಭ್ಯಗಳು, ಅನಾನುಕೂಲಗಳು ಕೂಡ ಎಷ್ಟೋ ಸಲ ಜಾತಿ ಯಿಂದ ಬಂದವಾಗಿರುತ್ತವೆ- ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬನು ತನ್ನ ಜಾತಿಗೆ ಅಂಟಿ ಕೊಳ್ಳಲು ಇಷ್ಟಪಡುವುದು ತಪ್ಪಾದರೂ ಅದಕ್ಕೆ ಮನೋವೈಜ್ಞಾನಿಕವಾದ ಕಾರಣಗಳಿವೆ. ಜಾತಿಯ ಆಧಾರದ ಮೇಲೆ ರೂಪಿತವಾಗುವ ಸಂಘಟನೆಗಳು ಈ Cultural affinityಯ ಅಂಶದ ನೆರವನ್ನು ಪಡೆಯುತ್ತವೆ ಒಬ್ಬ ವ್ಯಕ್ತಿ ಇನ್ನೊಬ್ಬನಿಗೆ ಸ್ಪಂದಿಸಬೇಕಾದರೆ ಅವರಿಬ್ಬ ರಲ್ಲೂ ಸಮಾನ ವಿಚಾರ, ಮನೋಧರ್ಮ, ಹಿನ್ನೆಲೆಗಳು ಕೆಲಸ ಮಾಡುತ್ತಿರುತ್ತವೆ—ಸದ್ಯ ಇವುಗಳನ್ನು ರೂಪಿಸುವಲ್ಲಿ ಜಾತಿ ಮತ್ತು ಜಾತಿಯಿಂದ ದಕ್ಕುವ ವಾತಾವರಣ ಜಾತ್ಯಾತೀತ ಸಂಸ್ಥೆಗಳಾದ ಶಿಕ್ಷಣ, ವಿಶ್ವವಿದ್ಯಾಲಯ, ಸರ್ಕಾರ, ಇತ್ಯಾದಿಗಳಿಂದ ನಿರ್ಮಾಣವಾಗುವ ವಾತಾ ವರಣಕ್ಕಿಂತ ಪ್ರಬಲವಾದುದರಿಂದ ಮನುಷ್ಯ-ಮನುಷ್ಯರ ನಡುವೆ ಉಂಟಾಗುವ ಸಂಬಂಧ ಸಂಘಟನೆಗಳು ಜಾತಿಯನ್ನು ಆಧರಿಸಿದ್ದರೆ ಅದು ಅಸಹಜವೇನಲ್ಲ.

ತನ್ನ ರೀತಿಯ ವಿಚಾರ, ಮನೋಧರ್ಮ ಇರುವವರೊಡನೆ ಮಾತ್ರ ಸ್ಪಂದಿಸುವುದು ಬೇರೆ ವಿಚಾರಗಳಿಗೆ, ಅನುಭವಗಳಿಗೆ ಬೆಲೆ ಕೊಡದಿರುವುದು, ತೆರೆದುಕೊಳ್ಳಲು ನಿರಾಕರಿಸು ವುದು ಇದು ಜಾತಿಪ್ರೇಮಕ್ಕಿಂತ ಅಪಾಯಕಾರಿಯಾದ್ದು. Cultural Incest ಒಂದು ರೀತಿಯ ದೌರ್ಬಲ್ಯವನ್ನು ಸೂಚಿಸುವಂತದ್ದು—ಹೊಸ ಸಂಬಂಧ, ಹೊಸ ಸಂಸ್ಕೃತಿ, ಹೊಸ ವಿಚಾರ ಇವುಗಳ ಬಗ್ಗೆ ಇರುವ ಅನಗತ್ಯ ಭಯ, ಸಂಕೋಚಗಳು ತಾನೀಗಾಗಲೆ ಪಡೆದಿರುವ ಸಂಬಂಧ ವಿಚಾರ ಹಿನ್ನೆಲೆಗಳ ಬಗ್ಗೆ ಅನಗತ್ಯ ಮೋಹ-ವ್ಯಾಮೋಹ-ಇದು Cultural Incestನ್ನು ಸೂಚಿಸುವಂತದ್ದು.ವಿವಿಧ ಜಾತಿ ಮತ್ತು ಬುಡಕಟ್ಟುಗಳ ನಡುವೆ ಯಾವಾಗಲೂ ನಡೆಯುತ್ತಿರುವ ತಿಕ್ಕಾಟಗಳು, ಕೊಡು-ಕೊಳ್ಳುವ ಸಂಬಂಧಗಳು ನಮ್ಮ ದೇಶದಲ್ಲಿ Cultural Incestನ್ನು ಅಸಾಧ್ಯವಾಗಿಸಿವೆ. ಹಾಗಾಗಿಯೆ ಇಲ್ಲಿ ಯಾವ ಜಾತಿಯು Pure ಆಗಿ ಉಳಿದಿಲ್ಲ- ಯಾವ ಅನುಭವವೂ ಎಲ್ಲ ಕಾಲದಲ್ಲೂ ಯಾವುದೊಂದೇ ಜಾತಿಗೆ ಮೀಸಲಾಗಿ ಉಳಿದಿಲ್ಲ. ನಮ್ಮ ಸಮಾಜದ ಜಾತೀಯತೆ, ಜಾತಿಪ್ರೇಮದ ಬಗ್ಗೆ ಎತ್ತರದ ಧ್ವನಿಯಲ್ಲಿ ಮಾತಾಡುವವರು ನಮ್ಮ ಸಮಾಜ ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳಲು Cultural Incestನ್ನ ಗೆದ್ದ ಬಗೆ

ಯನ್ನು ತಿಳಿಯಬೇಕು-ಹಾಗೆ ಮಾಡಿದಾಗ ಮಾತ್ರ ಜಾತಿ, ಜಾತಿ ಸಮಸ್ಯೆ ಬಗ್ಗೆ ಇರುವ ಅನಗತ್ಯ obsession-ಗೊಂದಲಗಳು ತಪ್ಪುತ್ತವೆ.

(ಇಲ್ಲಿ ಮುಂಡಿಸಿರುವ ವಿಚಾರಗಳಲ್ಲಿ ಕೆಲವು ವಿರೋಧಾಭಾಸಗಳಿವೆ. ಈ ವಿರೋಧಾಭಾಸ ಕೂಡ ಜಾತಿ ಸಮಸ್ಯೆಯು ಸಂಕೀರ್ಣತೆಯನ್ನು ಸೂಚಿಸುವಂತದ್ದು—ನಾವೆಲ್ಲರೂ ಜಾತ್ಯಾತೀತ ರಾಗಬೇಕೆಂದು ಕರೆಕೊಡುವಾಗ ಯಾವ ವಿರೋಧಾಭಾಸ ಗೋಚರವಾಗದಿದ್ದರೂ,ಸಮಸ್ಯೆ ಬಗ್ಗೆ ಪ್ರಾಮಾಣಿಕವಾಗಿ ಯೋಚಿಸಿದಾಗ, ನಮ್ಮ ನಿಲುವುಗಳನ್ನು ನಾವೇ ಪರೀಕ್ಷಿಸಿಕೊಂಡಾಗ ಅದರಲ್ಲಿರುವ ವಿರೋಧಾಭಾಸಗಳು ಗೋಚರವಾಗುತ್ತವೆ. ಈ ಟಿಪ್ಪಣಿ ಇಂತಹ ವಿರೋಧಾ ಭಾಸಗಳನ್ನು ದಾಖಲಿಸುವ ಒಂದು ಪ್ರಯತ್ನ. ಚರ್ಚೆಗೆ ಇದರಿಂದ ಒಂದು ಅವಕಾಶ ದೊರಕ ಬಹುದೆಂಬ ಆಸೆಯು ಇದಕ್ಕೆ ಕಾರಣ.)

## ದಲಿತ ಸಾಹಿತ್ಯ / 'EPW'

1981ರ, ಡಿಸೆಂಬರ್‌ನಲ್ಲಿ ಗುಜರಾತಿನ ಲೋಕಯಾನವು ಮುಂಬೈನಲ್ಲಿ ದಲಿತಸಾಹಿತ್ಯದ ಮೇಲೆ ಒಂದು ವಿಚಾರ ಸಂಕಿರಣವನ್ನೂ ವ್ಯವಸ್ಥೆಗೊಳಿಸಿತ್ತು. ಮರಾಠಿ ಮತ್ತು ಗುಜರಾತಿ ಲೇಖಕರು ಮತ್ತು ವಿಮರ್ಶಕರು ಪ್ರಪ್ರಥಮವಾಗಿ ಸೇರಿದ, ಭರವಸೆ ಹುಟ್ಟಿಸಬಹುದಾಗಿದ್ದ ಸಮಾವೇಶ ಅದಾಗಿತ್ತು. ಆದರೆ ನಿಜಸ್ಥಿತಿ ಎಂದರೆ, ಎರಡೂ ಸಾಹಿತ್ಯಗಳು ನಡೆಸಿದ ಚರ್ಚೆ ಮತ್ತು ವಿಚಾರಗಳು, ಔಪಚಾರಿಕ ಹಾಗೂ ಪ್ರಾಥಮಿಕವಾಗಿತ್ತು. ಆದರೂ ಮುಖ್ಯವಾಗಿ ಗುಜರಾತಿನ ದಲಿತ ಸಾಹಿತಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದರಲ್ಲಿ ಈ ಸಂಕಿರಣ ಯಶಸ್ವಿಯಾಯಿತು. ಬೇರೆಡೆಗಳಿಗೆ ಹೋಲಿಸಿದರೆ ಗುಜರಾತಿನ ದಲಿತ ಚಳುವಳಿ ಇನ್ನೂ ಬೆಳೆಯುವ ಹಂತದಲ್ಲಿದೆ. ಮಹಾರಾಷ್ಟ್ರದ ದಲಿತ ಚಳುವಳಿ ಹೊಂದಿರುವಂಥ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಳುವಳಿಗಳು ಪರಂಪರೆಯ ಹಿನ್ನೆಲೆಯನ್ನೂ ಅದು ಹೊಂದಿಲ್ಲ. ಆ ಕಾರಣದಿಂದಾಗಿಯೇ, ಈ ಸಂಕಿರಣ ಉಪಯುಕ್ತ ಮಾಹಿತಿಗಳ ಹಾಗೂ ಅನುಭವಗಳ ವಿಚಾರ ವಿನಿಮಯ ಮಾಡುವಲ್ಲಿ ಹೆಚ್ಚು ಪ್ರಾಮಾಣಿಕವಾಗಿತ್ತು.

ಗುಜರಾತಿನ ಸುಮಾರು ನಲವತ್ತು ಜನ ಸಂಕಿರಣದಲ್ಲಿ ಭಾಗವಹಿಸಿದ್ದರು. ಕಳೆದ ವರ್ಷ ಅಹಮದಾಬಾದಿನ 'ಆಕ್ರೋಶ್' ಎಂಬ ಮ್ಯಾಗಜಿನ್‌ನ ಒಂದು ಸಂಚಿಕೆಯನ್ನು ಸರ್ಕಾರ ಬಹಿಷ್ಕರಿಸಿದ್ದು ರಾಷ್ಟ್ರಖ್ಯಾತಿಯನ್ನೇ ಪಡೆಯಿತು. ರಾಷ್ಟ್ರೀಯ ಬೂಜ್ವಾಗಳ ಬೆಳವಣಿಗೆಯ ಬಗ್ಗೆ ಜನಸಾಮಾನ್ಯರನ್ನು ಉದ್ರೇಕಿಸುವ ವಸ್ತುವನ್ನೊಳಗೊಂಡ ದಲಿತ ಕವನ ವನ್ನೂ ಪ್ರಕಟಿಸಿದ್ದೇ ಈ ಸಂಚಿಕೆಯ ಬಹಿಷ್ಕಾರಕ್ಕೆ ಕಾರಣವಾಯಿತು. 'ಆಕ್ರೋಶ್' ಜೊತೆಗೆ ಸಂಬಂಧವಿದ್ದ ಎಲ್ಲಾ ಯುವ ಸಾಹಿತಿಗಳೂ ತಮ್ಮ ದೃಷ್ಟಿಕೋನಗಳ ವಿನಿಮಯಕ್ಕಾಗಿ ಭಾಗ ವಹಿಸಿದ್ದರು, ಭಾಗವಹಿಸಿದ್ದ ದಲಿತ ಬರಹಗಾರರಲ್ಲಿ ಮರಾಠಿಗಳು ಬಹಳ ಕಡಿಮೆ ಮಂದಿ. ಏಕೆ ಹೀಗಾಯಿತೆಂಬುದೇ ಆಶ್ಚರ್ಯ. ಸುಮಾರು ಇಪ್ಪತ್ತೈದು ದಲಿತ ಲೇಖಕರ ಎದುರು ಮರಾಠಿಗಳ ಸಂಖ್ಯೆ ಕೇವಲ ಮೂರೋ ನಾಲ್ಕೋ. ಉಳಿದವರು, ಸಾಹಿತ್ಯ ವಿಮರ್ಶಕರು, ಸಮಾಜವಾದಿ ಚಿಂತಕರು, ಸಮಾಜ ವಿಜ್ಞಾನಿಗಳು.

ಸಂಕಿರಣ ಯಶಸ್ವಿಯಾಯಿತು. ಗುಜರಾತಿನ ದಲಿತರ ಸಾಮಾಜಿಕ ಹಾಗೂ ಚಾರಿತ್ರಿಕ ವಿರೋಧದ ಗಂಭೀರ ಪ್ರಯತ್ನ ಪ್ರಥಮವೆಂದೇ ಹೇಳಬೇಕು. ಮೊದಲನೆ ದಿನ ದಲಿತ ಪ್ರತಿ

ಘಟನೆಯು ಸಾಮಾಜಿಕ ಚೌಕಟ್ಟಿನ ಬಗೆಗೆ ಚರ್ಚೆ ನಡೆಯಿತು. ಅಂಕಿ ಅಂಶಗಳ ಆಧಾರದ ಮೇಲೆ ಗುಜರಾತಿನ ದಲಿತರ ಜನಸಂಖ್ಯೆ ಮತ್ತು ಅದು ಹಂಚಿಕೆಯಾಗಿರುವ ರೀತಿ, ಅಹಮದಾಬಾದಿನ ಶೇ. 15 ಹಾಗೂ ಸಬರಕಂತದಲ್ಲಿ ಶೇ. 20ಕ್ಕೂ ಹೆಚ್ಚಿನ ದಲಿತರನ್ನು ಅಂಕಿ ಅಂಶಗಳು ಕಡೆಗಣಿಸಿದ್ದರ ಬಗ್ಗೆ, ಚರ್ಚೆ ನಡೆಯಿತು. ಚರ್ಚೆಯಲ್ಲಿ ಮಾತನಾಡಿದವರು ದಲಿತ ಪ್ರಜ್ಞೆ ಎಚ್ಚರಗೊಂಡಿರುವ; ದಲಿತ ಚಳುವಳಿಗಳ ಮುನ್ನಡೆಯ; ಚಳುವಳಿಯ ಮೇಲೆ ಬೀರಿದ ಅನೇಕ ಪ್ರಭಾವಗಳ-ಬಗ್ಗೆ ಹೇಳುತ್ತಾ, ಮಹಾರಾಷ್ಟ್ರದಲ್ಲಿ ಫುಲೆ, ಅಗಾರ್ಕರ್ ಮತ್ತು ಅಂಬೇಡ್ಕರರು ಸಂಯೋಜಿಸಿದ ಸಾಮಾಜಿಕ ಪುನಃನಿರ್ಮಾಣ ಮತ್ತು ದಲಿತ ಪ್ರತಿಭಟನೆ ಗುಜರಾತಿನಲ್ಲಿ ನಿರಂತರವಾಗಿ ಕಾಣಬರದೇ ಇದ್ದುದರ ಬಗ್ಗೆ ಪ್ರಸ್ತಾಪಿಸಿದರು. ಭಾನು ಅಧ್ವರ್ಯು, ಮೊಹಮದ್ ಶೇಕ್, ಮಾನಿಷಿಜಾನಿ, ಅಚ್ಯುತ್ ಯಾಜ್ಞಿಕ್, ಪುಣೇಕರ್‌ರವರು, ಪರಿಶಿಷ್ಟ ಜಾತಿಗಳೆಂದು ಇದುವರೆವಿಗೂ ಗುರುತಿಸದ ಕೆಲವು ಪರಿಶಿಷ್ಟ ಜಾತಿಗಳು, ದಲಿತ ಚಳುವಳಿಯಲ್ಲಿ ಪ್ರತಿಕ್ರಿಯಿಸಲು ಅವುಗಳಿಗಿರುವ ಸಮಸ್ಯೆಗಳು ಮತ್ತು ಅವರ ಸುತ್ತಲ ಸಾಮಾಜಿಕ ಹಾಗೂ ಆಡಳಿತಗಾರರ ದಬ್ಬಾಳಿಕೆ-ಇವುಗಳನ್ನು ಎತ್ತಿತೋರಿಸಿದರು. ಮರಾಠಾ ದಲಿತ ಚಳುವಳಿಯ ಬಗ್ಗೆ ಬಾಲಚಂದ್ರಪಡ್ಕೆ, ಅರುಣಕಂಬ್ಳೆ, ಅರ್ಜುನ ಡಾಂಗೆ, ದಿನ ಕರಶಕ್ರಿಕಾರ ಮತ್ತು ದೇಶಪಾಂಡೆ ವಿವರಿಸಿದರು.

ಮಧ್ಯ ಯುಗದ ಪ್ರತಿಭಟನಾ ಸಾಹಿತ್ಯವನ್ನೂ ಇಂದು ವಿರೋಧಿಸುವವರಿಗೆ ಸಂಬಂಧಪಟ್ಟ ಸ್ವಾರಸ್ಯಕರವಾದ ವಿಷಯವನ್ನೂ ಈ ಚರ್ಚೆಯಲ್ಲಿ ವಿವರಿಸಿದವರು ದಲಪತ್‌ಚವ್ಹಾಣ್ ತರಹದ ಕೆಲವರು. ಇದರ ಬಗ್ಗೆ ಕುತೂಹಲಕರವಾದ ಒಂದು ವಾಗ್ವಿವಾದವೇ ನಡೆಯಿತು. ಸಮಕಾಲಿನ ಸಾಹಿತ್ಯಕ್ಕೆ ಸಮಕಾಲೀನ ವಿರೋಧವನ್ನು ವ್ಯಕ್ತಪಡಿಸುವ ಚವ್ಹಾಣ್ ಸೋನಾಲ್ಕರ್ ಹಾಗೂ ದೇಶಪಾಂಡೆಯಂಥವರು-ಇದು ಐರೋಪ್ಯ ಸಾಹಿತ್ಯದಿಂದಾದ ಆಘಾತ; ಸಮಕಾಲೀನ ಪ್ರತಿಭಟನೆ ಇಂದಿನದು ಹಾಗಾದಲ್ಲಿ ಮಾತ್ರ ಅದು ಪರಿಣಾಮಕಾರಿ ಅದು ಅಖಂಡವಾಗದೇ ಇರುವುದು-ಇವು ಈ ಸಂದರ್ಭದಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ಹಾಗೆ ಕೇಳಿಬಂದ ಧ್ವನಿಗಳು.

ಸಧ್ಯದ ಪರಿಸ್ಥಿತಿಯಲ್ಲಿ ದಲಿತ ಸಾಹಿತ್ಯದಲ್ಲಿ ನಡೆಯುತ್ತಿರುವ ಪ್ರಯೋಗಾತ್ಮಕತೆಯ ರೂಪ (ಮುಖ್ಯವಾಗಿ ಬೀದಿ ನಾಟಕ)ಗಳನ್ನು ವಿಶ್ಲೇಷಿಸಿದವರು ಮಾನಿಷಿಜಾನಿ, ಶೇಕ್, ಪಡ್ಕೆ, ಅರ್ಜುನ ಡಾಂಗೆ, ಅರುಣಡಾಂಗೆ ಮುಂತಾದವರು. ಈ ಚರ್ಚೆ ಸ್ವಲ್ಪ ಅಸಂಬಂಧವಾಗಿದ್ದು, ನಿಜಾಂಶವನ್ನು ನಿರೂಪಿಸುವಲ್ಲಿ ಕೊರತೆ ಕಂಡುಬರುತ್ತಿತ್ತು. ವಿಮರ್ಶನಾತ್ಮಕ ಚರ್ಚೆಯೂ ಅಂಥಹ ಸುಸಂಗತವಾದುದೇನೂ ಆಗಿರಲಿಲ್ಲ. 'ಒಂದು ವ್ಯವಸ್ಥೆಗೆ ಒಳಪಟ್ಟಿರುವ ಕಲಾತ್ಮಕ ಸೌಂದರ್ಯವನ್ನು ತಳ್ಳಿ ಹಾಕುವುದು ಅಥವಾ ಹಾಕಲೇಬೇಕು ಎಂದರೇನರ್ಥ?' ಎಂಬ ಪ್ರಶ್ನೆಗೆ ಉತ್ತರ ವಿಭಿನ್ನವಾಗಿದ್ದಂತೆ ಕಾಣುತ್ತಿತ್ತು. ವಿರೋಧಿಸುವುದರಲ್ಲಿಯೂ ಸ್ಪರ್ಧಿಗಳ ಖಚಿತವಾದ ಅಭಿಪ್ರಾಯ ಕಂಡುಬರಲಿಲ್ಲ. ಮರಾಠಿ ಕಡೆಯ ಕಂಬ್ಳೆ ಮತ್ತು ಪಡ್ಕೆ ಹೊಸತೇನನ್ನೂ ಹೇಳದೆ ಹಳೆಯ ವಿಷಯಗಳನ್ನೆ ಮನೋರಂಜಕವಾಗಿ ಪುನಃ ಪುನಃ ಹೇಳುವುದರಲ್ಲೇ ತೃಪ್ತರಾದರು. ಇವರಿಗೆ ಹೋಲಿಸಿದರೆ ಗುಜರಾತಿ ಬರಹಗಾರರೇ ಈ ಪ್ರಶ್ನೆಯ ಬಗ್ಗೆ ಹೆಚ್ಚು ಗಂಭೀರವಾದ ಹಿಡಿತ ಹೊಂದಿದಂತೆ ಕಂಡುಬಂದರು. ಇದೇ ರೀತಿಯ ಚರ್ಚೆ ದಲಿತ ಲೇಖಕರು ಬಳಸಿಕೊಂಡಿರುವ ಭಾಷೆಯ ಬಗ್ಗೆಯೂ ನಡೆಯಿತು. ಯಾರ ಜೊತೆ ಸಂವಹಿಸುವುದಕ್ಕಾಗಿ ಅವರು ಈ ಮಾಧ್ಯಮ ಬಳಸುತ್ತಿದ್ದಾರೆ ? ಕಳೆದ ಒಂದು ತಲೆಮಾರಿನಿಂದ ಪರಿಚಿತರಾಗಿರುವ ದಲಿತ ಬರಹಗಾರರು, ಬಳಸಿಕೊಂಡಿರುವ ಭಾಷೆಯಿಂದ ಭಾಷಾ

ಶಾಸ್ತ್ರಕ್ರಮಕ್ಕೆ ಏನಾಗುತ್ತದೆ ? ಬ್ರಾಹ್ಮಣ ಸಾಹಿತ್ಯದ ವಿರೋಧ, ಸಾಹಿತ್ಯ ಮತ್ತು ಭಾಷೆಯನ್ನೂ ನೋಡುವಂತೆ, ರೂಢಿಯಲ್ಲಿ ಬಂದಿರುವ ಸಾಹಿತ್ಯ ಮತ್ತು ಭಾಷೆಗಳತ್ತಲೂ ನೋಡುವ ಅಗತ್ಯವನ್ನೊಳಗೊಂಡಿದೆಯೇ ? ಒಳಗೊಳ್ಳಲೇಬೇಕೆ ? ಈಗಲೂ ಕೂಡ ಈ ಪ್ರಶ್ನೆಯಲ್ಲಿ ಮರಾಠಿಗರಿಗಿಂತ ಗುಜರಾತೀ ಲೇಖಕರೇ ಹೆಚ್ಚು ಅರ್ಥಪೂರ್ಣವಾಗಿ; ಪ್ರಾಮಾಣಿಕರಾಗಿ ಭಾಗವಹಿಸಿದರು. ಈಗಾಗಲೇ ಗುಜರಾತಿ ದಲಿತ ಸಾಹಿತ್ಯ ಕಾರ್ಯರೂಪದಲ್ಲಿ ಈ ಸಮಸ್ಯೆಯನ್ನು ಬಗೆಹರಿಸುವ ಮಟ್ಟದಲ್ಲಿರುವುದೇ ಇದಕ್ಕೆ ಕಾರಣ. ಇದರ ಭಾಷೆ, ಜೀವಂತ, ತೀಕ್ಷ್ಣ ಹಾಗೂ ಹೆಚ್ಚು ಯಥಾರ್ಥವಾದುದು. ಪ್ರಾಮಾಣಿಕತೆ ಮತ್ತು ಯಥಾರ್ಥತೆಯನ್ನು ಅಪೇಕ್ಷಿಸುವಂಥ ವಿಮರ್ಶಾ ಸೂತ್ರಗಳ ಬಗ್ಗೆಯೇ ಚರ್ಚೆನಡೆಯಿತು.

ಎರಡನೇ ದಿನದ ಚರ್ಚೆ ದಲಿತ ಸಾಹಿತ್ಯದ ಬಗೆಗಿರುವ ವಿಮರ್ಶಾತ್ಮಕ ಅಭಿಪ್ರಾಯಗಳ ಕಡೆಗೆ ತಿರುಗಿತು. ದಲಿತ ಚಳುವಳಿ ಮತ್ತು ಸಾಹಿತ್ಯ, ಭೌತವಾದಿ ಸಂಪ್ರದಾಯದಲ್ಲಿ ಅದು ನೆಲೆಗೊಳ್ಳಬೇಕಾದ ಅವಶ್ಯಕತೆ: ಬೌದ್ಧ ಧರ್ಮ ಮತಾಂತರ ಚಳುವಳಿಯ ಸ್ವರೂಪ ಮತ್ತು ಸ್ಥಿತಿ: ಇನ್ನೂ ಹಲವು ವಿಷಯಗಳಾಗಿ ಚರ್ಚೆಗೆ ಗುರಿಯಾದವು. ಅಂಬೇಡ್ಕರ್ ಮತ್ತು ಅವರ ವ್ಯಕ್ತಿತ್ವದಿಂದ ಮರಾಠಿ ದಲಿತರಷ್ಟು ಗುಜರಾತಿಗರು ಪ್ರಭಾವಿತರಾಗಲಿಲ್ಲ ವೆಂಬುದು ಈ ಸಮಯದಲ್ಲಿ ಸ್ಪಷ್ಟಪಡಿಸಲೇಬೇಕಾದ ಸಂಗತಿ. ಅಂಬೇಡ್ಕರ್‌ರವರು ಸೂತ್ರೀಕರಿಸಿದ ಕೆಲವು ಅಂಶಗಳು ಈ ಕಾಲಕ್ಕೆ ಹೊಂದಿಕೊಳ್ಳಲಾಗದು ಎಂಬ ಅಭಿಪ್ರಾಯವನ್ನು ಗುಜರಾತಿ ಆದಿವಾಸಿ ಲೇಖಕರೊಬ್ಬರು ಎತ್ತಿದರು. ಅಂಬೇಡ್ಕರರ ವಿಚಾರಗಳು ಮರಾಠಾ ದಲಿತರಿಗೆ ಅವರು ನೋಡಲಾಗದಷ್ಟು ತುಂಬಾ ದೂರವಾಗಿರುವ ಹಾಗೂ ಅದರ ಆವಶ್ಯಕತೆಯೂ ಅವರಿಗೆ ಬೇಡವಾದಂತೆ ಕಾಣುತ್ತದೆ. ಆದರೆ ಅಂಬೇಡ್ಕರರ ವಿಚಾರಗಳ ಪ್ರಾಮುಖ್ಯತೆಯನ್ನು ಸೂಕ್ಷ್ಮವಾಗಿ ಅರಿತುಕೊಂಡ ಗುಜರಾತಿ ಲೇಖಕರು ಯಾವ ವಿಚಾರವಾದಿಯನ್ನೇ ಆಗಲಿ, ಅಂತಹ ಯಾವುದೇ ಕೆಲವು ಮಿತಿಗಳನ್ನೂ ಹಾಕದೆ ಅದನ್ನು ಅರಿತುಕೊಳ್ಳುವ ಆಕಾಂಕ್ಷೆಯುಳ್ಳವರಾಗಿದ್ದಂತೆ ಕಂಡುಬಂದರು. ಇಂಥ ಒಂದು ನಿರ್ಮಾಣ ಹಂತದಲ್ಲಿ ಮರಾಠಿಯವರಿಗಿಂತ ಗುಜರಾತಿನ ದಲಿತರ ಚಳುವಳಿಗಳು ಬಿಚ್ಚು ಮನಸ್ಸಿನದಾಗಿತ್ತು.

ದಲಿತ ಲೇಖನಗಳು ಮತ್ತು ವಿಮರ್ಶೆಗಳಲ್ಲಿ ಕಂಡು ಬಂದ ಆರಂಭದ ಆದರ್ಶಗಳ ಮೇಲೆ ನಂತರ ಚರ್ಚೆ ಆರಂಭವಾಯಿತು. ಈ ಆದರ್ಶಗಳು ದಲಿತ ಬರಹಗಾರರು ಮತ್ತು ವಿಮರ್ಶಕರ ಬರಹಗಳ ಸಂಕುಚಿತ ದೃಷ್ಟಿಗೆ ಸ್ವಲ್ಪ ಮಟ್ಟಿಗೆ ಕಾರಣವಾಗಿರಬಹುದೆಂಬುದು ಕಂಡು ಬಂದಿತು. ದಲಿತರ ಸಾಮಾಜಿಕ, ರಾಜಕೀಯ ವಿಶ್ಲೇಷಣೆ ಮತ್ತು ಟೀಕೆಗಳು. ಇವುಗಳನ್ನೋದುವ ಓದುಗನ ಮನದಲ್ಲಿ ಭಾರತ ಹೊರಗಿನ ಪ್ರಭಾವಗಳಿಂದ ಮುಕ್ತವಾದ ಒಂದು ದ್ವೀಪವೆಂಬ ಭಾವನೆ ತರುವುದೆಂಬ ವಿಷಯವನ್ನು ದೇಶಪಾಂಡೆ ಎತ್ತಿ ತೋರಿದರು. ಇಂದಿನ ಪ್ರತಿಯೊಂದು ಘಟನೆಯೂ ಸಂಗತಿಗಳೂ ಅಂತರಾಷ್ಟ್ರೀಯವಾಗಿ ಒಂದು ದೃಷ್ಟಿಕೋನವನ್ನು (ಒಂದು ರೂಪವನ್ನು) ಪಡೆದಿದೆ ಎಂಬುದನ್ನು ಅವರೆಲ್ಲ ಮರೆತಂತಿತ್ತು. ಅಶೋಕ್‌ಪಾಟೀಲ್, ಶ್ರಮಿಕವರ್ಗ ಮತ್ತು ಬ್ರಾಹ್ಮಣ ಸಂಸ್ಕೃತಿಯ ಮೇಲೆ ಹೆಚ್ಚು ಸಮರ್ಪಕವಾಗಿ ಮಾತನಾಡಿದರೂ ಬ್ರಾಹ್ಮಣ ಸಂಸ್ಕೃತಿಗಳಿಗಿಂತಲೂ ಕಡಿಮೆ ಅಪಾಯಕಾರಿಯಲ್ಲದ ಬೇರೆ ಸಂಸ್ಕೃತಿಗಳನ್ನು ಅವರು ಮರೆತಿದ್ದಂತಿತ್ತು. ಇಂದಿನ ಲೇಖಕರು, ದಲಿತ ಬರಹಗಾರರ ಲೇಖನಗಳನ್ನೂ ಮತ್ತು ವಿಮರ್ಶೆಗಳನ್ನು ಕೇಳಿ, ಓದಿ, ದಲಿತರು ತಮ್ಮದೇ ಆದ ಒಂದು ಸೀಮಿತ ಪ್ರದೇಶದೊಳಗೆ–ಸಂಕುಚಿತ ಭಾವನೆಗಳ ಅನುಭವವನ್ನೂ ಪಡೆದಿದ್ದಾರೆಂಬ ಭಾವನೆ ಹೊಂದುವುದು ಸಾಧ್ಯ. ಆ ಪ್ರದೇಶದ ಹೊರಗೂ ವಿಶಾಲ ಪ್ರಪಂಚವಿರುವುದೂ

ನಿಜ. ಆದರೆ ಸ್ಪಷ್ಟವಾದ ಅವರು ಪ್ರತಿಪಾದಿಸಿದ ಮುಖ್ಯ ಅಂಶವೆಂದರೆ ಪ್ರಾಪಂಚಿಕ ಅನುಭವಗಳಿಗೆ ಸಂಬಂಧಿಸಿದಂತೆ ನಮ್ಮ ದೇಶದಲ್ಲಿರುವ ಸಾಹಿತ್ಯ ಪ್ರವಾಹ ತುಂಬಾ ಚಿಕ್ಕದು ಹಾಗೂ ಸಂಕುಚಿತವಾದದ್ದು. ಲೋಕಯಾನ ಸಂಕಿರಣವು ಈ ಅಂಶವನ್ನು ಮತ್ತೊಮ್ಮೆ ಸ್ಪಷ್ಟಪಡಿಸಿತು. ಆದರೆ ದಲಿತ ಲೇಖಕರು ತಮ್ಮ ಚಿಕ್ಕ ಅನುಭವ ಕ್ಷೇತ್ರಕ್ಕಿಂತ ವಿಶಾಲವಾಗಿರುವ ಪ್ರಪಂಚದ ಬಗ್ಗೆ ಹೆಚ್ಚು ವಿಚಾರ ತಿಳಿದುಕೊಳ್ಳುವ ಬಗ್ಗೆ ಯಾವ ಆಸ್ಥೆಯನ್ನು ತೋರಲಿಲ್ಲ. ವಿಷಯ ಗ್ರಹಿಕೆಯಲ್ಲಿ ಕೊರತೆ ಹಾಗೂ ಔದಾಸೀನ್ಯದಿಂದ ತುಂಬಿದ ಸಂಕಿರಣ ಇದಕ್ಕೆ ಸಾಕ್ಷಿಯಾಯಿತು. ದಲಿತ ಲೇಖಕರು ಈಗ ತಾವು ಪಡೆದಿರುವ ಕ್ಷೇತ್ರಕ್ಕಿಂತ ಆಚೆಯಿರುವ ವಿಶಾಲ ಕ್ಷೇತ್ರದಲ್ಲಿ ತಮ್ಮ ವಿಶ್ಲೇಷಣೆ ಮತ್ತು ದೃಷ್ಟಿಕೋನವನ್ನು ಪಡೆಯಬೇಕಾದುದು ಅವಶ್ಯಕ. ಹೀಗೆ ಮಾಡಿದಲ್ಲಿ ಅವರು ತಮ್ಮ ಕ್ರಾಂತಿಕಾರಕ ಉತ್ತರಗಳಿಗೆ ಸಮನಾಗಿ ನಿಲ್ಲಬಹುದು. ಈ ಸಾಮರ್ಥ್ಯ ಅವರಿಗಿದ್ದೆ ಇದೆ.

(ಅನು : ಆನಂದೂರು ಸತ್ಯಮೂರ್ತಿ)

---

"ಯಾವುದೇ ಸಾಹಿತ್ಯವನ್ನು ಅದರ ಸಾಂಸ್ಕೃತಿಕ ಸಂದರ್ಭದಿಂದ ಹೊರತು ಪಡಿಸಿ, ನಮಗೆ ಹೊಸದಾಗಿ ಹೊಳೆದ ಅಥವಾ ಎರವಲು ತಂದ, ಸಿದ್ಧಾಂತಗಳ ನೇರಕ್ಕೆ ನೋಡುವುದು ಸರಿಯಾದುದಲ್ಲ. ಹಳೆಯ ಬೀಗಗಳನ್ನು, ಹೊಸ ಕೀಲಿಕೈಗಳಿಂದ ತೆಗೆಯಲು ಹೋದರೆ, ಅತ್ತ ಬೀಗವೂ ಹಾಳು, ಬೀಗದ ಎಸಳೂ ಹಾಳು. ಯಾವುದೇ ಕಾಲದ ಸಾಹಿತ್ಯ ಎಲ್ಲ ಕಾಲಕ್ಕೂ 'ರಿಲೆವೆಂಟ್' ಆಗಬೇಕೆಂದು ಪರಮಾವಧಿ ನಿರೀಕ್ಷಿಸುವುದೇ ಸರಿಯಲ್ಲ ; ಒಂದು ಕಾಲದ ಸಾಂಸ್ಕೃತಿಕ ಸಂದರ್ಭದ ಒತ್ತಡಗಳಿಂದ ಉದ್ಭವಿಸುವ ಸಾಹಿತ್ಯ, ಆ ಕಾಲಕ್ಕೆ ಸಂಪೂರ್ಣವಾಗಿ ಸಲ್ಲುವಂತೆ, ಉಳಿದ ಕಾಲಗಳಿಗೆ ಸಂಪೂರ್ಣ ಸಲ್ಲದೆ ಹೋಗಬಹುದು ; ಹಾಗೆಂದ ಮಾತ್ರಕ್ಕೆ ಸಾಹಿತ್ಯದಲ್ಲಿ ಸಾರ್ವಕಾಲಿಕವಾದದ್ದು ಏನೂ ಇಲ್ಲವೆಂದು ಅರ್ಥವಲ್ಲ ; ಯಾವುದೇ ಕಾಲದ ಸಾಹಿತ್ಯವನ್ನು ಅಂದಂದಿನ ಸಾಂಸ್ಕೃತಿಕ ಸಂದರ್ಭಗಳ ಹಿನ್ನೆಲೆಯಿಂದ ಅರ್ಥಮಾಡಿಕೊಳ್ಳುವ ವಿಮರ್ಶನ ಪ್ರಯತ್ನಗಳು ಹೆಚ್ಚು ಪ್ರಯೋಜನಕಾರಿಯಾಗಬಲ್ಲವೆಂಬುದು ನನ್ನ ಮಾತಿನ ಅರ್ಥ"

–ಜಿ. ಎಸ್. ಶಿವರುದ್ರಪ್ಪ

# ಪರಿಚಯ

**ಕೇರಳದ ಸಾಹಿತಿ**
**ಪೊಟ್ಟೆಕಾಟ್**

○

ಒ. ಕೆ. ನಂಬಿಯಾರ್

ಪೊಟ್ಟೆಕಾಟ್‌ರವರ ಸಾಹಿತ್ಯಕೀರ್ತಿಯ ಉತ್ಕರ್ಷತೆಯು ಕೇರಳದಲ್ಲಿ ಬೆಳೆದ ಸಮಾಜವಾದ ಮನೋಭಾವನೆಗೆ ಸಂಬಂಧಿಸಿದೆ.

ಗಾಂಧೀವಾದ ಮತ್ತು ರಾಷ್ಟ್ರೀಯ ವಾದಗಳು ತಮ್ಮ ತುರೀಯಸ್ಥಿತಿಯಲ್ಲಿದ್ದಾಗ ವಲ್ಲತ್ತೋಲರು ಬೆಳಕಿಗೆ ಬಂದರು. ಆಗ ರಾಷ್ಟ್ರೀಯತೆಯು ಕಲಾಸ್ಫೂರ್ತಿಯನ್ನೂ, ಅಭಿವ್ಯಕ್ತಿಯ ರೀತಿ ಮತ್ತು ಮಾಧ್ಯಮವನ್ನೂ ರಾಷ್ಟ್ರದೊಳಗೇ ಕಂಡುಕೊಂಡಿತು. ಆಗಿನ ಕಾಲವು ನಾನಾ ಕಾವ್ಯವಸ್ತುಗಳನ್ನು ಒದಗಿಸಲಸಮರ್ಥವಾಗಿದ್ದುದರಿಂದ ಸಾಹಿತಿಗಳು, ಪಲಾಯನ ವಾದಿಗಳಾಗಿ ದೇಶದ ಪೂರ್ವವೈಭವವನ್ನು ನೆನಸಿಕೊಳ್ಳ ತೊಡಗಿದರು. ಅನುಭವಿಸುತ್ತಿದ್ದ ಕಾಲವು ಅವರಿಗೆ ಪರಿತಾಪಯೋಗ್ಯವಾಗಿ ಕಂಡಿತು ; (ಭಿಕ್ಷುಕ) ಗತಕಾಲವು ವರ್ಣನೆಯ ವಸ್ತುವಾಗಿತ್ತು. (ಕರ್ಮಭೂಮಿಯ ತೊದಲ್‌ನಡೆ) ವಲ್ಲತ್ತೋಲರು ಅಕ್ಬರನ ಕಾಲದ ಘಟನೆಯೊಂದರಲ್ಲಿ ಹಿಂದೂ ಮುಸ್ಲಿಮರ ಬಾಂಧವ್ಯದ ಸ್ವರ್ಣ ಯುಗವನ್ನು ಕಂಡರು. (ಭಾರತೀಯ ಸ್ತ್ರೀಯರ ಪಾತಿವ್ರತ್ಯ) ಪುರಾಣಕಾಲದ ವೀರ್ಯ ಮತ್ತು ಸಾಹಸವನ್ನು 'ಅನಿರುದ್ಧ'ದಲ್ಲಿ ಚಿತ್ರಿಸಿದರು. ಪಾರಂಪರ್ಯದ ಗುಣ ವಿಶೇಷಗಳ ಪರಿಪಕ್ವತೆಯನ್ನು 'ನನ್ನ ಗುರು'ವಿನಲ್ಲಿ ಹಿಡಿದಿಟ್ಟರು.

ಆಗಿನ ಕಾಲವೆಂದರೆ ನಮ್ಮ ರಾಷ್ಟ್ರೀಯ ಜೀವನಕ್ಕೆ ಬೇಕಾದ ಭಾವೋದ್ವೇಗಗಳನ್ನು ಎಚ್ಚರಿಸಬೇಕಾದ ಕಾಲ. ವಲ್ಲತ್ತೋಲರು ಅದನ್ನು ಕಾವ್ಯದ ಮೂಲಕ ಮಾಡಿದರು. ರಾಷ್ಟ್ರೀಯ ಚಳವಳಿಯ ಮೊದಲನೆಯ ಹೆಜ್ಜೆಯನಂತರ ಬುದ್ಧಿಯ ಪ್ರಭಾವವು ಸಾಹಿತ್ಯದಲ್ಲಿ ಬೆಳೆಯತೊಡಗಿತು. ಸಮಾಜವಾದ ಮತ್ತು ಕಮ್ಯೂನಿಸಂನ ಪ್ರಚಾರ ಹರಡತೊಡಗಿತು. ಸಮಾಜ ಮತ್ತು ಅದರ ಆರ್ಥಿಕಸ್ಥಿತಿಯ ಪ್ರಶ್ನೆಗಳ ಮೇಲೆ ಒತ್ತಡ ಹೆಚ್ಚತೊಡಗಿತು.

ಈ ಎರಡು ಕಾರಣಗಳಿಂದಾಗಿ ನವೆಯುತ್ತಿದ್ದ ಕೇರಳವು ನವವಾದಗಳ ಪ್ರವಾದಿಗಳು ಉಚ್ಚರಿಸಿದುದನ್ನೆಲ್ಲಾ ಸಂತೋಷದಿಂದ ಸ್ವೀಕರಿಸಲಾರಂಭಿಸಿತು.

೧೯೩೦ರಿಂದ ಇಂದಿನವರೆಗೆ, ಈ ಹೊಸ ವಾದ ಭದ್ರವಾಗಿ ಉಳಿದಿದೆ. ಆರ್ಥಿಕ ದುಃಸ್ಥಿತಿ ಮತ್ತು ಒಡೆಯ-ಒಕ್ಕಲುಗಳ ತಿಕ್ಕಾಟಗಳು ಜನತೆಯನ್ನು ಈದಾರಿ

ಯಲ್ಲಿ ಇನ್ನಷ್ಟು ಮುಂದುವರಿಯುವಂತೆ ಮಾಡಿದೆ. ಪೂರ್ವದ ಚಿಂತನೆಯ ಸ್ವಪ್ನ ಸಂತೋಷದಲ್ಲಿ ಜನರು ಅತೃಪ್ತಿಪಡಲಾರಂಭಿಸಿದರು. ತಮ್ಮ ತ್ವರಿತ ಆವಶ್ಯಕಗಳಿಂದಾಗಿ ಅವರು ವರ್ತಮಾನಕಾಲವನ್ನು ಮರೆಯಲಸಾಧ್ಯವಾಯಿತು. ಸಾಹಿತ್ಯ ದೈನಿಕ ಸಮಸ್ಯೆಗಳಿಗೇ ಅಂಟಿಕೊಳ್ಳುವಷ್ಟು ಉದ್ದೇಶಪರವಾಗಿಯೂ ಕಾರ್ಯಪ್ರಚೋದಕವಾಗಿಯೂ ಆಗತೊಡಗಿತು. ಹೊಸ ಹೊಸ ವಸ್ತುಗಳು ಹೆಕ್ಕಲ್ಪಟ್ಟವು; ಸಾಮಾನ್ಯ ಜನಗಳ ದೊಡ್ಡ ತಂಡಕ್ಕಾಗಿಯೇ ಬರೆದ ಈ ನವಸಾಹಿತ್ಯವು ಗದ್ಯವನ್ನು ಹೆಚ್ಚುಹೆಚ್ಚಾಗಿ ಮತ್ತು ಶಾಸ್ತ್ರೀಯವಾಗಿ ಬಳಸತೊಡಗಿತು. ಮಾಸಪತ್ರಿಕೆಗಳು ಜನಾದರಣೆಯನ್ನು ಪಡೆದವು; ಸಣ್ಣ ಕತೆಗಳು ಅವರ ಮನಗಳನ್ನೊಲಿಸಿದುವು.

ಕೇರಳವು ತನ್ನ ಹೃದಯಸ್ಪಂದನ ಮತ್ತು ವಿಚಾರಧಾರೆಗೆ ಕಲೆಯ ಅಭಿವ್ಯಕ್ತಿಯನ್ನೀಯುವ ಓರ್ವ ಪ್ರತಿಭಾವಂತನಿಗಾಗಿ ಕಾಯುತ್ತಿತ್ತು. ಜನತೆಯ ನಿತ್ಯ ಜೀವನವನ್ನೂ, ಹೊಸ ಭಾವಗಳನ್ನೂ ಪ್ರತಿಬಿಂಬಿಸುವ ಪಾತ್ರ ಮತ್ತು ಘಟನೆಗಳ ಸೃಷ್ಟಿಗೆ ಹಾರೈಸುತ್ತಿತ್ತು.

ಹನ್ನೆರಡು ವರುಷಗಳ ಹಿಂದೆ ಪೊಟ್ಟೆಕಾಟರು ಕವಿಯಾಗಿ ಹೊರಬಂದರು. ಆಗ ಅಲ್ಲಿನ ನವೋದಯದ ಭಾವಾತಿರೇಕತೆಯು ಶೀಘ್ರವಾಗಿ ತಣಿಯುತ್ತಾ ಒಂದು ರೂಪವನ್ನು ತಾಳುತ್ತಿತ್ತು. ಈ ಕವಿಯ ಮೊದಲ ಕೃತಿಗಳು–ಹೆಚ್ಚಾಗಿ ಚಿಕ್ಕ ಭಾವಗೀತೆಗಳು–ವಾರಪತ್ರಿಕೆಗಳ ಖಾಲಿ ಜಾಗವನ್ನು ತುಂಬುವ ಸೇವೆಯನ್ನು ಮಾಡಿದುವು. ಇವು ಒಬ್ಬ ಕವಿಯು 'ತನ್ನ' ತನವನ್ನು ಹುಡುಕುವ ಕಾಲದವು; ಆಸನ್ ಮತ್ತು ವಲ್ಲತ್ತೋಲರ ಪ್ರಭಾವಕ್ಕೊಳಗಾದಾಗ ನಿರೀಕ್ಷಿಸಬಹುದಾದಂಥ ಕೃತಿಗಳಾಗಿವೆ. ಆಗಿನ ದಿನಗಳಲ್ಲಿ ಹೆಚ್ಚಾಗಿ ಸಾಹಿತ್ಯಾಭ್ಯಾಸಿಗಳು ತಮ್ಮ ಎದೆಯೊತ್ತಡಕ್ಕೆ ಕಾವ್ಯವೇ ಹೊರದಾರಿಯೆಂದು ತಿಳಿದುಕೊಂಡಿದ್ದರು. ನಮ್ಮ ಜನಗಳ ಮೇಲೆ ಆ ಎರಡು ಮಹಾ ವ್ಯಕ್ತಿಗಳ ಪ್ರಭಾವ ಬಹಳವಾಗಿತ್ತು. ಈಗಲೂ ನಮ್ಮಲ್ಲಿ ಟಾಗೂರರ ಹಿಂಬಾಲಕರೆನಿಸಿಕೊಂಡು, ಮಂಜಿನಂಥ ಸ್ವಚ್ಛಂದ ಕಾವ್ಯವನ್ನು ಬರೆಯುವವರಿದ್ದಾರೆ. ಆದರೆ ಪರಿಸ್ಥಿತಿ ಬದಲ್ಗೊಂಡು, ಅವರ ಪ್ರಭಾವ ಬಾಡತೊಡಗಿದಾಗ, ಪೊಟ್ಟೆಕಾಟರು ವಿಸ್ತಾರವೂ ಆಳವೂ ಆದ, ಶಕ್ತಿ ಮತ್ತು ಲಾಲಿತ್ಯಗಳು ಸೇರಿದ, ಸುಲಭವಾದ ಗದ್ಯದ ಎಡೆಗೆ ತಿರುಗಿದರು. ಕಾವ್ಯ ಒರಟಾದರೂ ಕಾವುಳ್ಳ ಉಲ್ಲೂರ್‌ರ ಆಲಿಂಗನದಲ್ಲಿದ್ದು ಪಲ್ಲಾತ್‌ರ ಸೆಳೆತಕ್ಕಾಗಿ ಕಾಯುತ್ತಿತ್ತು. ಚೆಂಗನ್ ಪೂಜಾರರು ಕೆಲವು ವೇಳೆ ಕವಿ ಹೃದಯದ ತಮೋಭಾವದಲ್ಲಿ ಸಂಪೂರ್ಣವಾಗಿ ಮುಳುಗಿದರೂ ಆಗಾಗ ಕಾವ್ಯದ ನೈಜತೆಯನ್ನು ಮುಟ್ಟುತ್ತಾರೆ. ಆದರೆ ಅದಕ್ಕಾಗಿ ಎಷ್ಟು ನೋವು! ಆದರ ಹೊರ ಹೊಮ್ಮುವಿಕೆಯು ಯಾವ 'ಭೀತಿ ಹೃದಯದ ಮಹಾತಮಸ್ಸಿ'ನಿಂದ! (Titanic glooms of chasmed fears.) ಎಡಪಲ್ಲಿ ಮತ್ತು ಚೆಂಗನ್‌ಪೂಜಾರಿಂದ ಪ್ರಾರಂಭವಾದ ಈ ರೋಮಾಂಟಿಕ್ ಪಂಥ ಕೆಲವು ವಿಶಿಷ್ಟ ಗುಣಗಳಿಂದ ಕೂಡಿದ್ದಿತು.

ಕವಿತೆಗಳಿಂದ ಗದ್ಯದತ್ತ ತಿರುಗಿ ಪೊಟ್ಟೆಕಾಟರು ಜನರ ಹೃದಯಕ್ಕೆ ಮತ್ತು ಕಾಲಗುಣಕ್ಕೆ ಸಮಾಸವರ್ತಿಗಳಾದರು. ಇದು ಮಲೆಯಾಳ ಸಾಹಿತ್ಯವು ರೋಮಾಂಟಿಕ್ ಪಂಥದಿಂದ ವಾಸ್ತವಿಕತೆಯತ್ತ ಹೊರಳಿದ ಆಂದೋಲನದ ಸಮಯದಲ್ಲಿ ನಡೆಯಿತು. ಕಡೆಗೊಮ್ಮೆ ಕರಿಯ ಮೋಡಗಳು ಮಳೆಹನಿಗಳನ್ನು ಸುರಿಸಿದವು.

ಪೊಟ್ಟೆಕಾಟರಿಗೆ ಅಭಿಮಾನಕಾರಿಯಾದ ಕೆಲವು ಕಾದಂಬರಿಗಳಿದ್ದರೂ, ಅವರ ಅತ್ಯುತ್ತಮ ಕೃತಿಗಳು ಸಣ್ಣಕತೆಗಳಾಗಿವೆ. ಅವು ಸಾಮಾನ್ಯ ಜನಜೀವನವನ್ನು ಸಾಧಾರಣ ಪರಿಸ್ಥಿತಿಯಲ್ಲಿ ಚಿತ್ರಿಸುತ್ತವೆ. ಈ ಕತೆಗಾರರಿಗೆ ಬಡಜನರು ಮತ್ತು ಸಮಾಜದಿಂದ ತಿರಸ್ಕರಿಸಲ್ಪಟ್ಟವರೆಂದರೆ ಅತ್ಯಂತ ಕನಿಕರ. ಮಾನವನು ಅವನಲ್ಲಿರುವ ತಪ್ಪುಗಳಿಂದಾಗಿ ಪೊಟ್ಟೆಕಾಟರನ್ನು ಸೆಳೆಯುವುದು ಹೆಚ್ಚು. ಕುಡುಕನೂ, ತಿರುಕನೂ ಆದವನೊಬ್ಬನನ್ನು ಅವರು ನಿರಾಯಾಸವಾಗಿ ತಮ್ಮ 'ನಾಡಿನ ಪ್ರೇಮ'ದ ನಾಯಕನನ್ನಾಗಿ ಮಾಡಿದ್ದಾರೆ. 'ವೇಶ್ಯೆಯ ಪತ್ರ'ವೆಂಬುದರಲ್ಲಿ ವೇಶ್ಯೆಯೊಬ್ಬಳು ಮೇರಿ ಮೆಗ್ಡಲೀನಳ ಕನ್ಯಾಶ್ರಮದಲ್ಲಿ ಸ್ಥಾನವನ್ನು ಪಡೆಯುತ್ತಾಳೆ. ಉದ್ಯೋಗಹೀನರು, ನಿರಾಶ್ರಿತರು, ದುಃಖಿಗಳು, ರೈತ ಮತ್ತು ಬೀದಿಯ ತಿರುಕ–ಇವರು ಪೊಟ್ಟೆಕಾಟರಿಗೆ ಬೇಕಾದವರು. ಅವರ ಪಾತ್ರನಿರೂಪಣೆಯಲ್ಲಿ ಡಿಕನ್ಸ್ ಮತ್ತು ಹ್ಯೂಗೋರ ಸಂತಾಪ ಕಂಡುಬರುತ್ತದೆ; ಆದರೆ ಅಲ್ಲಿ ಡಿಕನ್ಸ್ ಅತಿಭಾವುಕತೆಯೂ ಹ್ಯೂಗೋರ ಆಡಂಬರ ಮತ್ತು ವೈಪರೀತ್ಯವೂ ಕಂಡುಬರುವುದಿಲ್ಲ.

ಅವರ ಕಾದಂಬರಿಯಲ್ಲಿ ರಮ್ಯತೆಯೂ, ಭಾವದ ಸರಳತೆಯೂ ಇವೆ. ಆದರೆ ಅವರ ಪ್ರತಿಭೆ ಸೂಕ್ಷ್ಮನಿರೂಪಣೆಯಲ್ಲಿ ಒಡೆದುಕಾಣುತ್ತದೆ. ಕಾದಂಬರಿಯ ವಿಸ್ತಾರತೆಗೆ ಬೇಕಾದ ದೀರ್ಘ ಪರಿಶ್ರಮ ಮತ್ತು ಒಂದೇ ರೀತಿಯ ಹಿಡಿತ ಅವರಿಗೆ ಸೇರದು. 'ನಟನ ಪ್ರೇಮಮ್' ಮತ್ತು 'ಪ್ರೇಮಶಿಕ್ಷಾ' ಎಂಬ ಕಾದಂಬರಿಗಳಲ್ಲಿ ಆಗಾಗ ಕಾದಂಬರಿಗೆ ಸೋಲನ್ನು ತರುವಂಥ ಕುಗ್ಗುವಿಕೆಗಳಿದ್ದರೂ, ಅವರು ಕತೆಯನ್ನು ಹೇಳುವ ರೀತಿಯು ಅವುಗಳನ್ನು ರಕ್ಷಿಸಿದೆ. ಅವುಗಳನ್ನು ಮೊದಲು ಸಣ್ಣಕತೆಗಳಾಗಿಯೇ ಪೊಟ್ಟೆಕಾಟರು ಬರೆದರು ; ಆ ಮೇಲೆ ಅವು ಕಾದಂಬರಿಯ ವಿಸ್ತಾರವನ್ನು ಕಂಡುವು. ಈ ವಿಸ್ತಾರವಾದ ಕತೆ ಸಣ್ಣಕತೆಗಳಲ್ಲಿರುವ ತೀವ್ರತೆಯನ್ನು ಪಡೆದಿಲ್ಲ.

'ಸ್ತ್ರೀ', 'ವೇಶ್ಯೆಯ ಪತ್ರ', 'ಕ್ಷಯರೋಗಿ' ಮತ್ತು 'ಸ್ಮಾರಕಂ' ಇವು ಕ್ರಮವಾಗಿ ತಮ್ಮ ಮೆಚ್ಚಿನ ಸಣ್ಣಕತೆಗಳೆಂದು ಪೊಟ್ಟೆಕಾಟರೇ ಅಂದುಕೊಂಡಿದ್ದಾರೆ. ಕೇರಳದ ಜನಸಮುದಾಯವೂ ಅವುಗಳನ್ನೇ ಉತ್ತಮ ಕೃತಿಗಳೆಂದು ನಿರ್ಧರಿಸಿದೆ. ಇದು ಲೇಖಕ ಮತ್ತು ಓದುಗರ ನಿರ್ಧಾರಗಳ ಒಂದು ವಿಶೇಷವಾದ ಸಂಘಟನೆ. ಕಲಾವಿದ ಮತ್ತು ಜನತೆಯ ಈ ತರದ ಸಂಗಮದಿಂದ ಪೊಟ್ಟೆಕಾಟರ ಬರವಣಿಗೆಯ ಸಾಮಾಜಿಕ ಸಫಲತೆ ವಿಶೇಷವಾಗಿರಲು ಸಾಧ್ಯವಿದೆ. ಪೊಟ್ಟೆಕಾಟರ ಜನಪ್ರಿಯತೆ

ಜೀವಿತ ಸಾಹಿತ್ಯ(ಪ್ರಗತಿ)ಕೂಟದಲ್ಲಿ ಮಹತ್ವದ್ದಾಗಿದೆ. ಆದರೆ ಕೇರಳದ ಪ್ರಗತಿ ಕೂಟದಲ್ಲಿ ಕಾಣುವ ಶೈಥಿಲ್ಯ ಮತ್ತು ಆಡಂಬರಕ್ಕೆ ಅವರೇನೂ ಭಾಗಿಗಳಾಗಿಲ್ಲ.

ಪ್ರಗತಿವಾದದ ವಾಸ್ತವಿಕತೆ ಕೇರಳದಲ್ಲಿ ಹೆಚ್ಚು ಮುಂದಿಗೆ ತಿಳಿಯದ, ಇನ್ನೂ ಹೆಚ್ಚಿನವರು ಓದದ, ಕೆಲವು ಕಾದಂಬರಿಗಾರರು ಪ್ರಚುರಪಡಿಸಿದಂತೆ ಕಲೆಯ ಉದ್ದೇಶವನ್ನೇ ವಸ್ತುವೆಂದು ಭ್ರಮಿಸುವ ಪ್ರಾಮುಖ್ಯವಾದ ತಪ್ಪನ್ನು ಮಾಡಿದೆ. ನಾನಾ ತರದ ಭೋಗಸಾಮಗ್ರಿಗಳೊಡನೆ ನಾಯಕಿಯ ದೇಹಸೌಷ್ಠವದ ವರ್ಣನೆ ಅರ್ಧ ಪುಟದಷ್ಟಿರುತ್ತದೆ. ಈ ತರದ ವಿಪರೀತತೆಯಿಂದಾಗಿ ಕಾದಂಬರಿಯಲ್ಲಿ ನಾಯಕಿ ಯನ್ನೇ ಕಳೆದುಕೊಂಡತಾಗಿಲ್ಲವೆ ? ಆದರೆ ಪ್ರಾಚೀನನಾದ ಕಾಳಿದಾಸ ಅಂಥ ತಪ್ಪು ಗಳನ್ನು ಮಾಡಲಿಲ್ಲ. ಅವನ ನಾಯಕಿಯನ್ನು ಅಂತಃಪುರದಲ್ಲಿ ಸೌಂದರ್ಯ ಸಾಧನ ಗಳೊಡನೆ ಹುಡುಕಬೇಕಾಗಿಲ್ಲ ಶಕುಂತಲೆ ತುಂಬಿದ ದೇಹದಿಂದ, ಉಬ್ಬಿದ ಎದೆಯುವಳಾಗಿ, ಸುಂದರ ಚೇತೋದಾಯಕ ವನದಲ್ಲಿ ಬೆಳೆದವಳು. ಪೊಟ್ಟೆಕಾಟರಿಗೆ ಇಂಥ ಯಾವ ತರದ ವಿಶಾಲ ಭೂಮಿಕೆಯೂ ಬೇಕಾಗಿಲ್ಲ ; ಅವರ ಕತೆಗಳು ಪಿಸ್ತೂಲಿ ನಿಂದ ಗುಂಡು ಹಾರಿದಂತೆ ಮುಂಬರುತ್ತವೆ. ವರ್ಣನೆಯು ಕಾಲಹರಣ ಕತೆಗಳಿಗೆ ಮಾರಕ, ಬುದ್ಧಿವಾದದ ಪ್ರವಚನಕ್ಕಿಳಿಯದೆ ಅನಾವಶ್ಯಕ ಮತ್ತು ಕಾರ್ಯಪ್ರಚೋ ದಕವಲ್ಲದವುಗಳನ್ನೆಲ್ಲ ಬಹಳ ಚತುರತೆಯಿಂದ ಈ ಕತೆಗಾರರು ನಿವಾರಿಸುತ್ತಾರೆ. ಅವರಿಗೆ ವರ್ಗಗಳ ಭೇದಭಾವವಿಲ್ಲ ; ಅವರು ಇನ್ನೊಂದು ಕೂಟದ ಮೇಲೆ ವಿಷ ಕಾರಲು ತಿರಸ್ಕರಿಸುತ್ತಾರೆ. ಸದ್ಗುಣಗಳು ಟ್ರೇಡ್ ಯೂನಿಯನ್ ಮೆಂಬರರಾದವರಲ್ಲಿ ಮಾತ್ರವಿದ್ದು, ಕಂಪನಿಯ ಪಾಲುಗಾರರೆಲ್ಲಾ ದುರ್ಗುಣಿಗಳು—ಎನ್ನುವ ತಿಳುವಳಿಕೆ ಯನ್ನು ಅವರು ತುಂಬಾ ನಗೆಗೀಡು ಮಾಡುತ್ತಾರೆ. ಎಲ್ಲಾ ಗುಂಪುಗಳಲ್ಲಿಯೂ 'ಮಹಾಗುಣವಂತ' (Mighty good fellows)ರಿರುತ್ತಾರೆ. ನಾವು ಈ ಗುಂಪು ಗಳು ಅನವರತವೂ ಬಹುಮಟ್ಟಿಗೆ ಅನಾವಶ್ಯಕವಾಗಿ ಮಾಡುತ್ತಿರುವ ಜಗಳಗಳನ್ನು ಶಾಂತಗೊಳಿಸಿ, ಅವರನ್ನು ಎಷ್ಟರಮಟ್ಟಿಗೆ ಒಂದುಗೂಡಿಸುತ್ತೇವೋ ಅಷ್ಟು ಸಮಾಜ ದಲ್ಲಿ ಸ್ಥಾನಮಾನಗಳನ್ನು ಪಡೆಯುತ್ತೇವೆ. ಕಲಾವಿದರಾಗಿ ಪರಿಗಣಿಸುವ ಮಾನವ ಹೃದಯದ ಬೆಲೆಯು. ವಾಮಪಕ್ಷದ ಅರ್ಥಶಾಸ್ತ್ರಜ್ಞರು ಪಠ್ಯಪುಸ್ತಕಗಳಲ್ಲಿ ಹೇಳುವ ಹರಿತವಾದ ವರ್ಗವಿಭೇದಗಳಿಗೊಳಗಾಗುವುದಿಲ್ಲ. ಕಲೆಯು ಕಲಹಕುತೂಹಲಿಗಳಿಗಲ್ಲ. ಕಲಾವಿದರಾದ ಪೊಟ್ಟೆಕಾಟರಲ್ಲಿ 'ಮಾನವಹೃದಯದ ಮೂಕ ಶೋಕಗೀತೆ' (The still sad music of humanity) ಒಸರುತ್ತದೆ ; ಅದು ಅವರ ಅಂತರಾಳದಿಂದಲೇ ಹುಟ್ಟಿಬರುತ್ತದೆ.

ಪೊಟ್ಟೆಕಾಟರು ಸರಸ ಸಂಭಾಷಣೆಯಲ್ಲಿ ನಿಪುಣರು. ಅವರ ಕನ್ನಡಿಯಂಥ ಹೃದಯ ಉತ್ತಮ ಹಾಸ್ಯದ ಬುಗ್ಗೆಯಾಗಿದೆ. ಕೆಲವೊಮ್ಮೆ ಅವರ ಹಾಸ್ಯ ಕಿಡಿ ಯಾಗುವುದೂ ಇದೆ. ಅವರ ಪ್ರತಿಭೆಗೆ ನನ್ನ ಅನಂತ ವಂದನೆಗಳು.(1954)

## FORM IV

*Statement about ownership and other particulars about newspaper 'ANKANA' Bangalore as required to be published under section 19 D (b) of the press and Registration of Books Act, read with Rule 8 of the Registration of Newspaper (Central) Rules 1956*

| | | |
|---|---|---|
| 1. | Place of Publication | Bangalore |
| 2. | Periodicity of Publication | Bi-monthly |
| 3. | Printer's Name | B. Guru Murthy<br>Citizen of India<br>ILA Printers<br>153, 8th Cross, 4th Main<br>Bangalore-560 018 |
| 4. | Publisher's Name | C. Srinivasa Raju<br>Citizen of India<br>8, "Chiranjeevi"<br>Old Swimming Pool Road<br>Kodandarampura<br>Bangalore-560 003 |
| 5. | Editor's Name | A. R. Nirupama<br>Citizen of India<br>372, 24th 'B' Cross<br>Banashankari II Stage<br>Bangalore-560 070 |
| 6. | Names and Address of Individuals who own the Newspapers and Partners or Shareholders holding more than one percent of the total capital | C. Srinivasa Raju<br>Citizen of India<br>8, "Chiranjeevi"<br>Old Swimming Pool Road<br>Kodandarampura<br>Bangalore-560 003 |

I C. Srinivasa Raju, hereby declare that the particulars given above are true to the best of myknowledge and belief.

(Sd.) C. SRINIVASA RAJU
*Publisher*

*Date 5-3-1982*

## ಜನಕಲ್ಯಾಣದೆಡೆಗೆ ತೀವ್ರಗತಿಯ ಮುನ್ನಡೆ

## ಕರ್ನಾಟಕ ಸರ್ಕಾರ ಚೆನ್ನಾಗಿ ಕೆಲಸ ಮಾಡುತ್ತಿದೆ

**—ಶ್ರೀಮತಿ ಇಂದಿರಾಗಾಂಧಿ**

ಪ್ರಧಾನಿಯವರ ಹೊಸ 20 ಅಂಶಗಳ ಕಾರ್ಯಕ್ರಮವನ್ನು ಇನ್ನೂ ಹೆಚ್ಚಿನ ನಿಷ್ಠೆಯಿಂದ ಜಾರಿಗೊಳಿಸುವುದಾಗಿ ಕರ್ನಾಟಕ ಸರ್ಕಾರ, ಗಣರಾಜ್ಯ ದಿನಾಚರಣೆಯ ಈ ಶುಭದಿನದಂದು ಪ್ರತಿಜ್ಞೆ ಮಾಡುವುದು. ಹಿಂದಿನ ಸಾಧನೆಯ ಸಿಂಹಾವಲೋಕನ ಮುಂದಿನ ಪ್ರಗತಿಗೆ ಚೇತನ.

**ಹಕ್ಕುಪತ್ರಗಳ ವಿತರಣೆ :** ಉಳುವವನಿಗೇ ಭೂಮಿ ನೀಡುವ ಭೂ ಸುಧಾರಣೆ ಕಾಯ್ದೆಗೆ ಹೊಸ ಹುರುಪು ತುಂಬಿ ಶೇಕಡಾ 95 ರಷ್ಟು ಗೇಣಿದಾರರ ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ. ವಿತರಣೆ ಮಾಡಲಾದ ಹಕ್ಕು ಪತ್ರಗಳ ಸಂಖ್ಯೆ 57 ಸಾವಿರದಿಂದ 3 ಲಕ್ಷ 72 ಸಾವಿರಕ್ಕೇರಿದೆ. ಇದು ಸಾಧನೆಗೆ ಸಾಕ್ಷಿ.

**ನೀರಾವರಿಗೆ ಪ್ರಾಧಾನ್ಯತೆ :** ಹಾರಂಗಿ, ಹೇಮಾವತಿ ಮತ್ತು ಮಲಪ್ರಭಗಳಿಂದ ನೀರು ಬಿಡುವುದರ ಮೂಲಕ ಹೆಚ್ಚಿನ ಭೂಮಿ ನೀರಾವರಿಗೆ ಒಳಪಡಿಸಲಾಗಿದೆ. ಕೃಷ್ಣಾ ಮೇಲ್ದಂಡೆ ಯೋಜನೆ ಹಾಗೂ ಇತರ ನೀರಾವರಿ ಯೋಜನೆಗಳನ್ನು ಚುರುಕುಗೊಳಿಸಿ 81398 ಹೆಕ್ಟೇರ್ ಹೆಚ್ಚಿನ ಭೂಮಿಗೆ ನೀರು ನೀಡಲು ಆದ್ಯತೆ ನೀಡಲಾಗಿದೆ.

**ಒಂದು ಲಕ್ಷ ಕುಟುಂಬಗಳಿಗೆ ಮನೆ :** ಜನವರಿ 1980 ರಿಂದ ಅಕ್ಟೋಬರ್ 1981 ರವರೆಗೆ 1.18 ಲಕ್ಷ ಮನೆಗಳನ್ನು ನೀಡಲಾಗಿದೆ. ಇದೇ ಅವಧಿಯಲ್ಲಿ 12812 ಜೀತದಾಳುಗಳಿಗೆ ಪುನರ್ವಸತಿ ಕಲ್ಪಿಸಲಾಗಿದೆ.

**ಎಲ್ಲ ಹಳ್ಳಿಗಳಿಗೆ ಶಾಲೆ :** 300ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಪ್ರತಿ ಹಳ್ಳಿಗೂ ಶಾಲೆ ಮತ್ತು ಶಾಲಾ ಕೊಠಡಿಯನ್ನು ನೀಡಲು ನಿರ್ಧರಿಸಲಾಗಿದ್ದು, ಈ ವರ್ಷ 1688 ಶಾಲಾ ಕೊಠಡಿಗಳ ನಿರ್ಮಾಣ ಕೈಗೊಳ್ಳಲಾಗಿದೆ.

**ರೇಷ್ಮೆ ಉತ್ಪಾದನೆಯಲ್ಲಿ ಹೆಚ್ಚಳ :** ಜಾಗತಿಕ ಬ್ಯಾಂಕ್ ನೆರವಿನಿಂದ ಬೃಹತ್ ರೇಷ್ಮೆ ಅಭಿವೃದ್ಧಿ ಯೋಜನೆಯನ್ನು ರಾಜ್ಯದಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ. 1985 ರಲ್ಲಿ ಈ ಯೋಜನೆ ಪೂರ್ಣಗೊಂಡಾಗ ರೇಷ್ಮೆ ವಾರ್ಷಿಕ ಉತ್ಪಾದನೆ 2700 ಟನ್‌ಗಳಿಂದ 4300 ಟನ್‌ಗಳಿಗೆ ಹೆಚ್ಚುತ್ತದೆ.

**ಬಡತನದ ನಿರ್ಮೂಲನೆಗೆ ಒಂದು ಯೋಜನೆ :** ಇಡೀ ರಾಜ್ಯವನ್ನು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಅಂತರ್ಗತ ತರಲಾಗಿದ್ದು ಇಲ್ಲಿಯವರೆಗೆ 1.5 ಲಕ್ಷ ರೈತರು ಬಡತನರೇಖೆಗಿಂತ ಮೇಲೆ ಬರಲು ಸಹಾಯ ನೀಡಲಾಗಿದೆ. ಈ ವರ್ಷ 1.05 ಲಕ್ಷ ರೈತರನ್ನು ಬಡತನರೇಖೆಗಿಂತ ಮೇಲೆತ್ತಲು ಸಹಾಯ ನೀಡುವ ಯೋಜನೆ ಇದೆ. ವಿಶೇಷ ಯೋಜನೆಯ ಪ್ರಕಾರ ಆರನೆಯ ಯೋಜನೆಯಲ್ಲಿ 5.76 ಲಕ್ಷ ಹರಿಜನ ಕುಟುಂಬಗಳ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗಿದೆ.

'ಶ್ರಮ ಏವ ಜಯತೆ' ಎಂಬ ಪ್ರಧಾನಿಯವರ ಸಂದೇಶಕ್ಕೆ ಬದ್ಧವಾಗಿರುವ ಕರ್ನಾಟಕ ಸರ್ಕಾರ ಮುಂಬರುವ ವರ್ಷ ಕೃಷಿ, ವಿದ್ಯುಚ್ಛಕ್ತಿ, ಕೈಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ಉತ್ಪಾದನೆಯನ್ನು ಹೆಚ್ಚಿಸುವುದರ ಮೂಲಕ ರಾಷ್ಟ್ರೀಯ ಉತ್ಪಾದನಾ ವರ್ಷವನ್ನು ಯಶಸ್ವಿಗೊಳಿಸುವಲ್ಲಿ ತನ್ನ ಹಿರಿದಾದ ಕೊಡುಗೆ ನೀಡಲು ಕಂಕಣಬದ್ಧವಾಗಿದೆ.

ಪ್ರಕಟಣೆ :

**ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# 'ಅಂಕಣ' ಸ್ಥಾಯಿನಿಧಿ ಮನವಿ

ಪ್ರಿಯರೆ,

'ಆಲೋಕ' ಎಂಬ ಹೆಸರಿನಲ್ಲಿ ಆರಂಭವಾಗಿ ಈಗ 'ಅಂಕಣ'ವೆಂಬ ಹೆಸರಿನಲ್ಲಿ ಬರುತ್ತಿರುವ ಕಿರು ಪತ್ರಿಕೆಯ ಹದಿನೈದು ಸಂಚಿಕೆಗಳನ್ನು ನೀವು ಈಗಾಗಲೇ ಓದಿದ್ದೀರಿ ಅಲ್ಲವೆ ? ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗೆ ಮೀಸಲಾಗಿರುವ ಬರಹಗಳಿಗೆ, ವಾಗ್ವಾದಗಳಿಗೆ ಮೀಸಲಾದ ಈ ಪತ್ರಿಕೆಯು ನಿಮಗೆ ಇಷ್ಟವಾಗಿರಬೇಕು.

ಇಂಥ ಪತ್ರಿಕೆಗಳನ್ನು ಪ್ರಕಟಿಸುವುದು ಆರ್ಥಿಕವಾಗಿ ಹೆಚ್ಚು ಹೊಣೆಗಾರಿಕೆಯನ್ನು ಬಯಸುವುದೆಂಬ ಮಾತು ಹೊಸದೇನೂ ಅಲ್ಲ. ಕೇವಲ ಚಂದಾದಾರರನ್ನು ಆಶ್ರಯಿಸಿ ಉಳಿಯುವುದು, ಬೆಳೆಯುವುದು ಕಷ್ಟದ ಮಾತು. ಇದಕ್ಕಾಗಿ ನಾವೀಗ "ಒಂದು ಯೋಜನೆ"ಯನ್ನು ರೂಪಿಸಿ ಈ ಮನವಿಯನ್ನು ಮಾಡಿಕೊಳ್ಳುತ್ತಿದ್ದೇವೆ. ಅದರ ವಿವರ ಹೀಗಿದೆ :

ಪತ್ರಿಕೆಯನ್ನು ನಡೆಸಲು ನೆರವಾಗುವ "ಸ್ಥಾಯಿನಿಧಿ"ಯೊಂದನ್ನು ರೂಪಿಸುವುದು. ಈ ಪತ್ರಿಕೆಯ ಹಿತೈಷಿಗಳು "ಒಂದುನೂರು ರೂಪಾಯಿ"ಗಳನ್ನು ನೀಡಿ ಸ್ಥಾಯಿನಿಧಿಯನ್ನು ಬೆಳೆಸುವುದು. ಅವರಿಗೆ ಪತ್ರಿಕೆಯ ಸಂಚಿಕೆಗಳನ್ನು ಉಚಿತವಾಗಿ ಕಳುಹಿಸುವ ವ್ಯವಸ್ಥೆ ಮಾಡಲಾಗುವುದು. ಒಂದು ವೇಳೆ ಅವರಿಗೆ ಈ ಪತ್ರಿಕೆ ಬೇಡವೆನಿಸಿದರೆ, ಆ ಬಗ್ಗೆ ನಮಗೆ ಎರಡು ತಿಂಗಳ ಮೊದಲು ತಿಳಿಸಿ ಆ ನೂರು ರೂಪಾಯಿಗಳನ್ನು ಹಿಂತಿರುಗಿ ಪಡೆಯಲೂಬಹುದು.

ಈ ಯೋಜನೆಗೆ ನಿಮ್ಮ ನೆರವನ್ನು ನಾವು ಬಯಸುತ್ತೇವೆ. ತಮ್ಮ ವಿಶ್ವಾಸದ ಕೊಡುಗೆಯನ್ನು ನಿರೀಕ್ಷಿಸುತ್ತೇವೆ. ತಮ್ಮಿಂದ ಉತ್ತರವನ್ನು ಬೇಗನೆ ಬಯಸಬಹುದಲ್ಲವೆ ?

ಹಣವನ್ನು "ಕ್ರಾಸ್ ಮಾಡಿದ ಚೆಕ್" ಮೂಲಕ ಈ ಕೆಳಗಿನ ವಿಳಾಸಕ್ಕೆ ಕಳುಹಿಸಬಹುದು. ಚೆಕ್ ಅನ್ನು "ಅಂಕಣ"ದ ಹೆಸರಿಗೆ ಬರೆಯಿರಿ.

ವಿಳಾಸ :

'ಅಂಕಣ'
8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ
ಕೋದಂಡರಾಮಪುರ
ಬೆಂಗಳೂರು–560 003

ಎಸ್.ಎಲ್.ಎನ್.

# ಹಲ್ಲುಪುಡಿ



ತುಳಸಿ, ಬೇವು ಮತ್ತು ಇತರ ಗಿಡಮೂಲಿಕೆಗಳಿಂದ
ತಯಾರಿಸಲ್ಪಟ್ಟಿದೆ

ಹಲ್ಲುಗಳ ಬಿಳುಪು ಮತ್ತು ಒಸಡುಗಳನ್ನ
ಬಲಪಡಿಸುತ್ತದೆ ಮತ್ತು ಆರೋಗ್ಯವನ್ನು ರಕ್ಷಿಸುತ್ತದೆ

**L. No. CS-75/78**





Published by C. Srinivasaraju, 'Chiranjeevi', Old Swimming Pool Road Kodandarampura, Bangalore-560 003, Printed at ILA Printers, 153, 4th Main, 8th Cross, Bangalore-560 018. Editor A. R. Nirupama.

No. MAG (2) PQ3 DECL 322/1979-80
ANKANA (Kannada Bi-monthly) March 1982

# ದ. ರಾ. ಬೇಂದ್ರೆ

ವರ್ಣರಂಜಿತ ಸುಂದರ ಭಾವಚಿತ್ರ

**ಎರಡು ರೂಪಾಯಿ**

[ಅಂಚೆಯ ಮೂಲಕ ತರಿಸಿಕೊಳ್ಳುವವರು 0-50 ಪೈಸೆ ಹೆಚ್ಚಿಗೆ ಕಳುಹಿಸಬೇಕು. ನೂರು ಭಾವ ಚಿತ್ರಗಳನ್ನು ಒಟ್ಟಿಗೆ ತರಿಸಿಕೊಳ್ಳುವವರಿಗೆ ಅಂಚೆ ವೆಚ್ಚ ಉಚಿತ]

- ಜನವರಿ 31, ಬೇಂದ್ರೆಯವರ ಹುಟ್ಟಿದ ದಿನ. ಆ ದಿನದಿಂದ ಮೊದಲಾಗಿ ಒಂದು ವರ್ಷ ಕಾಲ ತಿಂಗಳಿಗೊಮ್ಮೆ ಬೇಂದ್ರೆಯವರ ಸಾಹಿತ್ಯವನ್ನು ಕುರಿತಂತೆ ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ಉಪನ್ಯಾಸಗಳನ್ನು ನಡೆಸಲಾಗುತ್ತಿದೆ. ನಾಡಿನ ಹಿರಿಯ ಸಾಹಿತ್ಯ ವಿಮರ್ಶಕರು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ. ಅವರ ಉಪನ್ಯಾಸಗಳನ್ನು ಅನಂತರ ಮುದ್ರಿಸಿ ಪ್ರಕಟಿಸಲಾಗುವುದು.

- ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ದ. ರಾ. ಬೇಂದ್ರೆಯವರ ವರ್ಣಚಿತ್ರವಿರುವ (ಕ್ಯಾಬಿನೆಟ್ ಆಕಾರ) ಕಾರ್ಡುಗಳ ಮಾರಾಟದಿಂದ ಒಂದು ಪುದುವಟ್ಟನ್ನು ರೂಪಿಸಲಿದೆ. ಈ ಪುದುವಟ್ಟಿನಿಂದ ಆಧುನಿಕ ಕನ್ನಡ ಕಾವ್ಯವನ್ನು ಕುರಿತಂತೆ ಪ್ರತಿ ವರ್ಷವೂ "ದ. ರಾ. ಬೇಂದ್ರೆ ಸ್ಮೃತಿ ಉಪನ್ಯಾಸ ಮಾಲೆ"ಯನ್ನು ನಡೆಸಿಕೊಂಡು ಹೋಗಲಾಗುವುದು.

- ಇದಲ್ಲದೆ, ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ವರ್ಷಕ್ಕೊಮ್ಮೆ ನಾಡಿನ ವಿದ್ಯಾರ್ಥಿಗಳಿಗಾಗಿ ಕವನ ಸ್ಪರ್ಧೆಯನ್ನು ಏರ್ಪಡಿಸಿ, ಉತ್ತಮ ಕವನಗಳನ್ನು ಆಯ್ದು ಪ್ರಕಟಿಸಲು, ಈ ಪುದುವಟ್ಟಿನಿಂದ ನೆರವು ಪಡೆಯಲಾಗುವುದು.

---

ಸಲಹೆ–ಸಹಾಯ–ಸಹಕಾರ: 'ಸ್ನೇಹವಲಯ'–'ಅಂಕಣ'

---

ಭಾವಚಿತ್ರಗಳು ದೊರೆಯುವ ಸ್ಥಳ:

**ಮನೋಹರ ಗ್ರಂಥಮಾಲೆ**
ಸುಭಾಷ್ ರಸ್ತೆ
ಧಾರವಾಡ-1

★ **ಕನ್ನಡ ಸಂಘ**
ಕ್ರೈಸ್ಟ್ ಕಾಲೇಜ್
ಬೆಂಗಳೂರು-29

★ **ಚೇತನ ಕನ್ನಡ ಸಂಘ**
ಚಾಮರಾಜ ಜೋಡಿ ರಸ್ತೆ
ಮೈಸೂರು-4